## ಸೂತ್ರಂ ॥ 31 ॥

ಸ್ವರಸಂಜ್ಞೆಕಂಗಳಮದೆೞ್ಗಂ ।
ದಿರೆ ಮುಂದೆ ವಿಕಲ್ಪದಿಂ ದ್ವಿತೀಯೆಗೆ ದೀರ್ಘಂ ॥
ದೊರೆಕೊಳ್ಗು ಮೆಲ್ಲಿಯಮಾನಂ ।
ಪುರಾತನೋಕ್ತಿಗಳೊಳಂ[1] ತದಲ್ಲಿ ಯಥೇಷ್ಟಂ ॥ 134

ಪ್ರಯೋಗಂ ॥

ವೃ ॥ ದಿವಾಕರನ ಪುಟ್ಟಿ ಪೋದ ದಿತಿಜಾಂಡಖಂಡಂಗಳಾ ।
ನವಂ ಪಿಡಿದು ಪದ್ಮಜಂ ತಗುಳೆ ಪಾಡಿ ಸಾ[2]ಮಂಗಳಂ ॥
ಸ[3]ವರ್ಣಜಲಜಾತಿಗಂಧಮದಕೋಪಸತ್ವಂಗಳಾ ।
ನವಂ ಪಡೆದನಿಂದ್ರಜಾಲಿಗನವೋಲೆ ಕಣ್ಗೊಪ್ಪಿದಂ ॥ 135

## ಸೂತ್ರಂ ॥ 32 ॥

ತುದಿಯೊಳ್ ದೀರ್ಘಾದೇಶಂ ।
ಪೊ[4]ದಱ್ದು ಷಷ್ಠೀವಿಭಕ್ತಿಗರೆಬರ ಮತದಿಂ ॥
ಪುದಿದಿಕ್ಕುರ್ಗಂ ಕೆಲಬರ್ ಖೇ ।
ದದೊಳಂ ಸಂಭ್ರಮದೊಳಂ ಪ್ರಯೋಗಿಸುವರದಂ ॥ 136

ಪ್ರಯೋಗಂ ॥

ಷಷ್ಠಿಯ ದೀರ್ಘಕ್ಕೆ ॥

ವೃ ॥ ಮೃಡನಾ ಗಂಗಾಂಬುಧಾರಾಜಟಲಿತಜಟನಾ ಪಾದಪ[5]ದ್ಮಕ್ಕೆ ಮುನ್ನಂ ।
ಪೊಡೆವಟ್ಟಂದ್ರಂ ಬೞಿಕ್ಕೀಕೆಗೆ ಪೊಡೆವಡೆ ತನ್ಮೌಲಿರತ್ನಪ್ರತಾನಂ ॥
ತೊ[6]ಡರ್ದುದ್ಯದ್ದ್ಯೋತಿ ತಟ್ಟುತ್ತಿಡಿದೞ್ಗಗಳ್[7]ವಿನ್ನೊಡಿದಂತಪ್ಪುವೀಗಳ್ ।
ಮುಡಿದತ್ತಿಂದ್ರಂಗಮುಗ್ರಾಸುರಬಲಮಥನೋದ್ಯೋಗಯೋಗಪ್ರಯೋಗಂ ॥ 137

ಖೇದಸಂಭ್ರಮಂಗಳ್ಗೆ ॥

ವೃ ॥ ಪೊಂಬಸದಿಂದಮೆಯ್ದೆ ಸಮೆದಂತೆಸೆದೊಪ್ಪುವ ಬಣ್ಣಮುಂ ಕರಂ ।
ಪಂಬಲಿಸಲ್ಕೆ ತಕ್ಕ ವಚಱಾಗಿಸದೋಗರಗಂಪುಮಾವ ಪೂ ॥
ವಿಂ ಬಗೆವಾಗಳಿಂತಿವೞೊಳಗ್ಗಳಮಾದೊಡಮಕ್ಕಟಾ ಮರು ।
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿನ್ನಿರ್ಮಿತ್ತದಿಂ ॥ 138
ಪುಗಿಲಂ ಕ್ರೀಡನಶೀಲನಕ್ಕರಿ[8]ಗನಾದಂ ಪಲ್ಲವಗ್ರಾಹಿ ಮಾ ।
ಸುಗಿ ನಮ್ಮಾದುದನಾಗಲುಂ ನ[9]ಮೆಯುಲುಂ ಮೆಯ್ದುಕ್ಕರ್ಮೋ ತಾ[10]ರನೆಂ ॥
ಜಗಡಾ ವೇ[11]ಳೆಯೆನೆಂಬ ಡೊಂ[12]ಬನಱಿಯಂ ಕು[13]ತ್ತಂ ನೆಲಕ್ಕಿಕ್ಕಿ[14]ದಂ ।
ದಗಲೆಂ ರಾ[15]ಜಿಗ ನಿನ್ನನೆನ್ನೊಡಲೊಳೆನ್ನೀಪ್ರಾಣಮುಳ್ಳನ್ನೆಗಂ ॥ 139

1 ಳಱ್ಱಿವುದಲ್ಲಿ. 2 ನಾಮಂ. 3 ಸುವರ್ಣಬಲ. 4 ಪೊದೞ್ದು. 5 ಯುಗ್ಮಕ್ಕೆ. 6 ಪೊಡರ್ದು. 7 ಳವಂಸೞಿದಂ ತಳ್ಕುವಿನಾಗಳ್. 8 ಗಿಲ. 9 ಮೆಮೆ. 10 ತಾರೆ. 11 ವೇಳೆಯ. 12 ದೊಬ. 13 ಮತ್ತಂ. 14 ಕ್ಕಲೆಂ. 15 ರಾಜಿಗ, ರಾಜಗ.

## ಸೂತ್ರಂ || 33 ||

ಮೊದಲ ವಿಭಕ್ತಿಯೆ ವಾಕ್ಯದ |
ಮೊದಲೊಳ್ ಪುದಿದಿರೆಯುಮುರುವಿಶೇಷಣಗತಿಯಿಂ ||
ಪದಸಂಸ್ಥಾನಂ ತಾನದು |
ತುದಿಯ ವಿಭಕ್ತಿಯೊಳೆ ಕಾರಕಾನ್ವಿತಮಕ್ಕುಂ || 140

ಪ್ರಯೋಗಂ ||

ಕಂ || ಸಂಗತಸ[1]ತ್ವಂ ಕುರುರಾ |
ಜಂಗಂ ಕರ್ಣಾಂಗಮೇಱಿಸಲ್ಕರಿದನಿದಂ ||
ತಾಂಗಡಮೇಱಿಪನೀಪಾ |
ರ್ವಾಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ || 141

ನರಪರೊಳಗೊಂದು ಕೋಟಿಯು |
ಮ[2]ರೆ ಚಾಪಬ[3]ಲಕ್ಕಧೀಶನಂ ದುಂದುಭಿಯುಂ ||
ಬ[4]ರಿಸಿ ಮದವರಜನೆಂದಂ |
ತಿರೆ ನೆಗೞೆಂದಾಹವಕ್ಕೆ ಪೇೞ್ದಂ ಬೆಸನಂ || 142

## ಸೂತ್ರಂ || 34 ||

ಕಾರಕಮುಂ ಕ್ರಿಯೆಯುಂ ಕ್ರಿಯೆ |
ಕಾರಕದಿಂದನ್ವಿತಾರ್ತ್ಥಮಾಗಿರ್ಪ್ಪನಮ ||
ಧ್ಯಾರೋಪಮೆಯ್ದುಗುಂ ತ |
ತ್ಕಾರಕಗತಿಯೊ[5]ಳ್ ವಿಭಕ್ತಿ ಪರಿಣತಮಕ್ಕುಂ || 143

ಪ್ರಯೋಗಂ ||

ವೃ || ಅಮೃತದ ಕಂಡಸಕ್ಕರೆಯ ಕೂಟಮುಮೊ[6]ಲ್ವಳ ಕೂಟಮುಂ ಸಮಾ |
ನಮೆ ವಲಮೊಲ್ಲದಳ್ಗೆ ವಿಟನೇ[7]ಟಮಿಟುಂ ಬ[8]ರೆ ಕೂಟಮಿಂಪನೀ ||
ಗುಮೆ ಫಲೆಗೊಂಡೆನಾಪೆಲೆಗೆ ಮೆಯ್ವೆಲೆ ಮೆಸು ನಿನತಿ[9]ತ್ತೆನೆಂಬ ಕೂ |
ಟಮನದನೊಂದುಕೂಟಮೆನಲಕ್ಕುಮೆ ಸಂಜೆನ ಕಾಳಕೂಟಮುಂ || 144

ಕಂ || ಪಿಡಿಯೆ ಮೆಲಲ್ ಪಿಡಿ ಸೃಕ್ಕಿದೊ |
ಳಡಸಿದ ಪಲ್ಲವಕೆ ಪಲ್ಲಮುಱಿ ನಿಳ್ಕುವುದುಂ ||
ಕಡೆಗಣ್ಣೊಳ್ ಕಂಡೊಂದಿಭ |
ಮುಡಿದಿತ್ತುದು ಸಾರ್ದ್ರಸಲ್ಲಕೀಪಲ್ಲವಮುಂ || 145

1 ಸತ್ವರೆಳಂರು. 2 ಮಾ. 3 ಬಲಕ್ಕಮಧೀಶನಂ. 4 ಬಿಡಿಸಿ ಮದವರಜನಂದಂ. 5 ದೊಳ್. 6 ವೋಲ್ವಳ. 7 ವಾಟ. 8 ಬಗೆಗೂಟ. 9 ಗಿತ್ತ.

ವಿಭಕ್ತಿಪರಿಣಾಮಕ್ಕೆ ॥

ವೃ ॥ ಅಸುಹೃತ್ಸೇನೆಗೆ ಸಾಲ್ವನೊರ್ವ್ವನೆ ಗಡಂ ರುದ್ರಾವತಾರಂ ಗಡಂ ।
ನೊಸಲೊಳ್ ಕಣ್ ಗಡಮೆಂದು ನಂ[1]ಬಿ ಪೊರೆದೆಂ ತಾನಕ್ಕೆ ತಮ್ಮಮ್ಮನ ॥
ಕ್ಕೆಸಲಂಬಂ ತಿರುವಾಯ್ಗೆ ತಂ[2]ದಱಿವರೇ ತಮ್ಮಿರ್ವ್ವರುಂ ಕೆಯ್ದುವಂ ।
ಬಿಸುಟರ್ ಜೋಳದ ಪಾೞಿಯುಂ ಬಗೆದರಿ[3]ಲ್ಲ ದ್ರೌಣಿಯುಂ ದ್ರೋಣನುಂ ॥ 146

ಸೂತ್ರಂ ॥ 35 ॥

ಜಾತಿಯೊಳಂ ಸಂಖ್ಯಾನಾ[4] ।
ಖ್ಯಾತಿಯೊಳಂ ಕೂಡಿ ನೆ[5]ಗಲ್ದನೇಕಬಹುತ್ವೋ ॥
ದ್ಯೋತನಪರಮೇಕತ್ವಂ ।
ಮಾತೇಂ ಭಾವದೊಳಮೇಕವಚನಮೆ ಅಕ್ಕುಂ ॥ 147

ಪ್ರಯೋಗಂ ॥

ಜಾತಿಗೆ ॥

ಕಂ ॥ ಕ[6]ರಿಯಿವು ಕರಿಯಲ್ಲಿವು ಗಿರಿ ।
ಗಿರಿಯಲ್ಲಿವು ಕರಿ ಕ[7]ರೀಂದ್ರಮಲ್ಲಿವು ಗಿರಿ ಪೋ ॥
ಕ[8]ರಿಗಿರಿಯೆಂದಿನಿಸಪ್ಪೊಡ ।
ಮರಣ್ಯದೊಳಗಱಿಯಲಾಗ ಕರಿಯುಂ ಗಿರಿಯುಂ ॥ 148

ಸಂಖ್ಯೆಗೆ ॥

ಕಂ ॥ ದೆಸೆ ಪತ್ತು ಜಲಧಿ ನಾಲ್ಕು ।
ಗಸವೊಂದು ಕುಲಾದ್ರಿಯೇೞು ತಾಮೆನೆ ಮತ್ತೀ ॥
ವಸುಧಾಮಧ್ಯದೊಳೆತ್ತಲ್ ।
ಮಿಸುಕುವನಿನ್ನೆತ್ತಲುೞಿವನಹಿತಕ್ಷಿತಿಪಂ ॥ 149

ಭಾವಕ್ಕೆ ॥

ಕಂ ॥ ನಡುವಣ ಕರ್ಪ್ಪುಂ ಕಡೆಯಣ ।
ಕಡುವೆಳ್ಪುಂ ತುದಿಯ ಕೂರ್ಪ್ಪುಮೆಸೆದಿರೆ ವಿಟರಂ ॥
ಬಿಡದಿಸಲೆ ತೆಗೆದ ಮದನನ ।
ನಿ[9]ಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ॥ 150

ಸಂಖ್ಯಾಜಾತಿವ್ಯತ್ಯಯಕ್ಕೆ ॥

ವೃ ॥ ಸಂತಮಿ[10]ರ್ಪ್ಪದೆ ನವಗ್ರಹಮಾಲಾ ।
ದಂತಿಗಳ್ ಪದುಳಮೋ ದಿವದೊಳ್ ನಿ ॥
ಶ್ಚಿಂತಮಿರ್ಪ್ಪರೆ ಸುರರ್ ದಿತಿಪುತ್ರಾ ।
ಕ್ರಾಂತಿಯಿ[11]ಲ್ಲ ಮಲಮೆಂಬುದುಮಾಗಳ್ ॥ 151

1 ನಚ್ಚಿ. 2 ದಂಡಮರಿದಂ. 3 ರಲ್ಲ. 4 ನು. 5 ನೆಗಲ್ದ. 6 ಕರಿಯುವು. 7 ಮರಂಗಳಲ್ಲಿವುಕಂ. 8 ಗಿರಿವರಮೆಂ. 9 ಇಡಿದ, 10 ಮಿರ್ಪ್ಪನೆ. 11 ಯಲ್ಲ.

## ಸೂತ್ರಂ ॥ 36 ॥

ನೀನಾಂ ತಾನೆನಿಕುಂ ಪ್ರಥ ।
ಮಾನಿರ್ದ್ದೇಶಕ್ಕೆ ನಿನಗೆಯೆನಗೆ ತನಗೆಯೆಂ ॥
ಜೀನುಡಿ ಚತುರ್ತ್ಥಿಯೊಳ್ ಸಲೆ ।
ತಾನಕ್ಕುಂ ಯುಷ್ಮದಸ್ಮದನ್ಯೋಕ್ತಿಗಳೊಳ್ ॥ 152

ಉದಾಹರಣೆ ॥

ಕಂ ॥ ಆನುಂ ದುಶ್ಶಾಸನನುಂ ।
ನೀನುಂ ಮೂವರೆ ದಲಾತನುಂ ಕೞಿದ ಬೞಿ ॥
ಕ್ಕಾನುಂ ನೀ[1]ನೆ ದಲೀಗಳ್ ।
ನೀನುಮಗಲ್ದಿತ್ತಪೋದಯುಂಗಾಧಿಪತೀ ॥ 153

ತಾನೆ ಗ[2]ಡಳಿಪಂ ಮೂರ್ಕ್ಖಂ ।
ತಾನೆ ಗಡಂ ತೊಡರ್ದು ಮುಡಿಗೆಗಂ ಬೋ[3]ವಕ್ಕಂ ॥
ತಾನೆ ಗಡ ಬಪ್ಪನೆನಿಸುವ್ರೊ ।
ಡಾ[4]ನರನಯ್ದಾಱುದಿವಸಮಂ ಬೞ್ದಪನೇ ॥ 154

ವೃ ॥ ಎನಗೆ ಕೂರ್ಪ್ಪುದನಾಘಟಸಂಭವಂ ।
ನಿನಗೆ ಕೂ[5]ರನೞಲ್ ನಿನತಲ್ತುಕೇ ॥
ಳೆನತು ತಂದೆಯ ಶೋಕಮನಿ[6]ರ್ವ್ವೇಗಮುಂ ।
ಮುನಿವರಂ ತವೆ ಕೊಂ[7]ದೊಡನೀಗುವಂ ॥ 155

ತನಗೆ ಮೋ[8]ಗಿನಿಸೆಂಬನಿತಾದೊಡಾ ।
ವನುಮನಾವನುಮೊಲ್ದು ಮೆ ಮೆಚ್ಚಲಂ ॥
ತಿನಿತು ಮೆಚ್ಚದರೆಲ್ಲಮನೆನ್ನುಮೆಂ ।
ದನಿತಱಿಂ ಪೞಿ ಸಾರ್ಗ್ಗವೆ ಗಂಡರಂ ॥ 156

## ಸೂತ್ರಂ ॥ 37 ॥

ಅವನಾತನೆಂಬ ಮಾತುಗ ।
ಳವು ಪುಲ್ಲಿಂಗಪ್ರಯೋಗದೊಳ್ ಸ್ತ್ರೀಗುಣದೊಳ ॥
ನ್ನವಳಾಕೆಯೆಂಬ ನುಡಿ ಸಂ ।
ಭವಿಕುಂ ಶೇಷದೊಳದೆಂಬ ಮಾ[9]ತೆಸೆದಿಕ್ಕುಂ ॥ 157

---

1 ನೀನೇಕಲಿಗಳ್. 2 ಗಳದಪಂ. 3 ಜೋವಕ್ಕಂ, ಬೊವಕ್ಕ. 4 ದಾನವನ್ಯಾದಾಱುದಿವಸದೊಳ್ ಒಂದವನೇ. 5 ಕೂರನದಲ್ ನಿನಗಿತ್ತು. 6 ನಿಸ್ಸಗವುಂ. 7 ಕೊ. ಕೊಂದೊಡನೀಗುವಂ. 8 ಮೋಹಿನಿ. 9 ಮಾತೆಂದಿಕ್ಕುಂ.

ಪ್ರಯೋಗಂ ॥

ಕಂ ॥ ಅವನಾತೆಯನಂತಾತನ ।
ನವಳುಮಗಲ್ದೊಂದುಪೊೞ್ತುಮಿರಲಾಱರ್ ಕೂ ॥
ರ್ಪವರನಿತುವರೆಗಮಾರೆನೆ ।
ಭವಾಂತರಸ್ನೇಹಮವರೊಳಾದುದಳುಂಬಂ ॥ 158

ವೃ ॥ ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ ।
ೞ್ಕೆಮದಲದು ಚಿತ್ತಜಂಗೆ ಕುಲದೈವಮದಂಗಜಚಕ್ರವರ್ತಿಗೆ ॥
ತ್ತಿದ ಪೊಸವಟ್ಟಮಂತದು ಮನೋಜನ ಕೆಯ್ಪಿಡಿಯೆಂದೆ ಮಾ[1]ೞ್ಪೆನಾ ।
ಸುದತಿಯ ರೂಪನಿಂ ಪೆಱತನೆಂದೊಡೆ ಚೀಃ ಕರಮೆಗ್ಗನಾಗೆನೇ ॥ 159

ಸೂತ್ರಂ ॥ 38 ॥

ನಿತ್ಯಂ ನಪುಂಸಕತ್ವಮು ।
ಪತ್ಯಕಲತ್ರಾದಿಶಬ್ದದೊಳ್ ಸ್ತ್ರೀಪುಂಸ ॥
ವ್ಯತ್ಯಯಮುಕ್ತಂ ಕರುಣೆೞೋ ।
ಪತ್ಯಕೆಗಳೊಳಂ ವಧಾಭಿಲಾಷಾದಿಯೊಳಂ ॥ 160

ಪ್ರಯೋಗಂ ॥

ಕಂ ॥ ತನಪತ್ಯಂ ಚಾ[2]ಗದ ಪೆಂ ।
ಪೊದವಿರೆ ನೆಗೞ್ದಳ್ ಜಗಕ್ಕೆ ವಿನಯಗುಣೈಕಾ ॥
ಸ್ಪದೆ ಸುಗ್ಗಿಯಬ್ಬೆ ತನಗೊಂ ।
ದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ ॥ 161

ಸರಸತಿಗಂ ಸಿರಿಗಂ ಮು ।
ಚ್ಚರಿಸುವ ವಿದ್ಯಾವಿಶೇಷವಿಭವೋನ್ನತಿಯಿಂ ॥
ಸುರಮಾನವಲಲನೆಯರೇ[3] ।
ದೊರೆಯುರುಮಾನೃಪಕಳತ್ರಮಂ ಪೋಲ್ತಪರೇ ॥ 162

ಆದಿಗ್ರಹಣಕ್ಕೆ ॥

ವೃ ॥ ಬರ್ವ್ವಳೆ ಪೆಮ್ಮಕ್ಕಳ್ ಬಗೆಗೊಂಡಿನ್ನಮಗೀಕೆಯ ಗಂಡುಗೂಸು ತಾಂ ।
ಸರ್ವ್ವಕಲಾವಿದಗ್ಧೆ ಪೆಱತೇನೊ ಸರಸ್ವತಿಗತ್ತಮತ್ತೆ ಪ ॥
ನ್ನಿ[4]ರ್ವ್ವರಲಗ್ಗಳಂ ಶ್ರುತದೊಳಾದೊಡಮೇನಿನಿಸೂನಮುಂಟು ಗಾಂ ।
ಧರ್ವ್ವಮನೊಂದುಮಂ ನೆಱೆಯೆ ಕಲ್ತಳ್ ಕಲ್ಪಿಪುದಂ[5]ತದಂ ನೃಪಾ ॥ 163

1 ಮಾಣ್ಣೆ. 2 ಭಾವದ, 3 ರೀ. 4 ನ್ನಿವ್ವರರೊಳಗ್ಗಳಂ. 5 ದಂತುಮಂ.

ಅಪರಾರ್ಧಕ್ಕೆ ।

ವೃ ॥ ಕರುಣದಿಂ ಮೃಗಮಂ ನಿ[1]ಜಾಂಕದೊಳಿಟ್ಟೊಡಾಕಱೆಯಾದೊಡೀ ।
ಧರೆ ಮೃಗಾಧಿಪನೆಂದುದಿಲ್ಲ ಮೃಗಾಂಕನೆಂದುದು ಚಂದ್ರನಂ ॥
ಕರುಣಮಿಲ್ಲದ ಸಿಂಗಮಂ ಮೃಗರಾಜನೆಂದುದು ಭೂಪರೊಳ್ ।
ಧರೆಗಧೀಶ್ವರನಕ್ಕುಮೇ ಪರಚಕ್ರಕರ್ಕಶನಲ್ಲದಂ ॥ 164

ಎಳನೀರೊತ್ತಿನೊಳೊತ್ತಿ ಬರ್ಪ ಪೊನಲೊಳ್ ಸಾಂದ್ರೇಂದುಕಾಂತೋಪಳೋ ।
ಚ್ಛಳಿತಾಚ್ಛಾಚ್ಛಜಳಪ್ರವಾಹಭರದೊಳ್ ಮಂದಾನಿಳಾಂದೋಳನಾ ॥
ಕುಳಿತಾರಾಮಫಳಾಮೃತೋಪಮರಸಸ್ರೋತಂಗಳೊಳ್ ಸಾಲ್ವಿನಂ ।
ಬೆಳೆದೋರಂತೊ[2]ಱಗಿರ್ದ್ದ ಶಾಲಿವನದಿಂ ಸೇವ್ಯಂ ನಗೋಪತ್ಯಕಂ ॥ 165

ಕಂ ॥ ಆವಳುಮನೊಲಿಸಿ ಕಾಟಿಸಿ ।
ಗೋ[3]ವರ ಗುಗ್ಗುರಿಗೆಮಾಡಿಯುಂ ತಣಿಯುಮ್ಪೆ ॥
ವ್ಯಾಘ್ರಮುಲಿಗನ[4]ಯೋ ಪೇೞೇಂ ।
ಸ್ತ್ರೀವಧೆ ನಿನಗಶ್ವಮೇಧಮೋ ಸಂ[5]ಬಳಮೋ ॥ 166

ವೃ ॥ ಎನಗದಱಭಿಲಾಷೆ ತಾನದೇನುಂ ।
ಮನದೊಳಗಿಲ್ಲ ವಿವೇಕಶೂನ್ಯನಾದಂ ॥
ತನಗನುಚಿತಮ[6]ಪ್ಪುದೊಂದಕೃತ್ಯ ।
ಕ್ಕೆನಿತುಮರಂ ಬಗೆದಂದನೂಹೆಯಿಂದಂ ॥ 167

ಗ್ರೀವಾದಿಯೊಳ್ ವಿಕಲ್ಪಕ್ಕೆ ॥

ವೃ ॥ ಕೈಲಾಸಾದ್ರಿಯನೆತ್ತಿ ನೊಂದ ಭುಜಸಂದೋಹಂಗ[7]ಳಂ ಕೃಷ್ಣಕೀ ।
ಲಾಲಂ ಸೋರ್ವಿನಮೆಯ್ದೆ ನೀಳ್ದನಿತುಮಾಗ್ರೀವಂಗಳಂ ರಾಗದಿಂ ॥
ನೀಲಗ್ರೀವನಳುಂಬಮಪ್ಪ ದಯೆಯಿಂದಂ ನೀವಿ ರಾಗಾಬ್ಧಿಕ ।
ಲ್ಲೋಲಂ ಪೆರ್ಚ್ಚೆ ದಶಾನನಂಗೆ ಪಿರಿದೊಂದು[8]ತ್ಸಾಹಮಂ ಮಾಡಿದಂ ॥ 168

ಕಂ ॥ ಗ್ರೀವೆ ಮೊಗಮಂಸಮಳಿಕಂ ।
ಭ್ರೂ ವಕ್ಷಂ ತೋ[9]ಳ್ ತೊಳಂಕು ತೊಡೆಯುಂಪಡೆಯೊಳ್ ॥
ತೀವಿದುವು ಭೀಮನಿಸೆ ವಿಶಿ ।
ಖಾವಲಿ ಮಾಱಾಂತರಾತಿಸೇನೆಯ ಮೆಯ್ಯೊಳ್ ॥ 169

## ಸೂತ್ರಂ ॥ 39 ॥

ಅಕಾರಕ್ಕೆ ಲಘೂಕೃತ ।
ಮೇಕಾರಂ ಬಹುಳಮಕ್ಕುಮೀದೂದಂತ ॥
ಕ್ಕೇಕಾಕ್ಷರಪದಮುಱಿಯೆ ನಿ ।
ರಾಕುಳದಿಂ ಹ್ರಸ್ವಮಕ್ಕು ಮೆಲ್ಗೆಬೆಗಳ್ಗಳ್ಗಂ ॥ 170

---

1 ನಿಜಾಂಗ. 2 ತೊಱೆದಿರ್ದ್ದ, ತೆಱೆದಿರ್ದ್ದ. 3 ಗೋವರುಗುಗ್ಗುರಿಕೆ. 4 ನೆಯೋ, ನೆಯಂ. 5 ಸಂಬಳ. 6 ಮಪ್ಪುತೊಂದಕೃತ್ಯ. ಮಪ್ಪುದೊಂದುಕೃತ್ಯ. 7 ಗಳಂ. 8 ದಾಹ್ಲಾದಮಂ. 9 ತೋಳ್ಗಳದು.

ಪ್ರಯೋಗಂ ॥

ಕಂ ॥ ಧರೆಯುಂ ಕ್ಷಮೆಯಿಂ ಹಿಮವ ।
ದ್ಗಿರಿಸುತೆಯುಂ ಪೆಂಪಿನಿಂ ಸುರಾಪಗೆಯುಂ ಬಿ ॥
ತ್ತರಿಸುವ ಜಸದೆಸಕದಿನನು ।
ಕರಿಸುವಳಾಕಾಂತೆ ಕಾಂತಿಯಿಂ ಶಶಿಕಳೆಯುಂ ॥ 171

ಬಹುಳಗ್ರಹಣಕ್ಕೆ ॥

ವೃ ॥ ಕಮಲಂಬೊಲ್ ಮೊಗಮುತ್ಪಲಂಬೊಲಲರ್ಗಣ್ ಚಕ್ರಾಹ್ವಯುಂಬೊಲ್ ಕುಚಂ ।
ಭ್ರ[1]ಮರಂಬೊಲ್ ಕಚಮಿಕ್ಷುಚಾಪದಳಿನೀಜ್ಯಾಯಂತೆವೊಲ್ ಬಾಸೆ ಕ ॥
ಣ್ಗಮರ್ದಿಂಬಾಗಿರೆ ಲ[2]ಕ್ಕ ಸೂಱಿ ಪರಸುತುಂ ಶ್ರೀಗಾ[3]ತ್ರವಸ್ತ್ರೂಪವೋ ।
ಪಮೆಯರ್ ದೈವದಗಣ್ಯಪುಣ್ಯವಧುವರ್ ಸೇಸಿಕ್ಕಿ ಬಂದಾಡಿದರ್ ॥ 172

ಅಂತುಮಲ್ಲದೆಯುಂ ॥

ವೃ ॥ ಉದಯಾಸ್ತೋನ್ನತಶೈಲಸೇತುಹಿಮವತ್ಕ್ರತ್ಕ್ರೀಳಪರ್ಯಂತಸಂ ।
ಪದೆಯುಂ ವಾರ್ಧಿತರತ್ತರಂಗನಿನದತ್ಕಾಂಚೀಕಳಾಪಾಂಚಿತಾ ॥
ಸ್ಪದೆಯುಂ ಸಾಧಿಸಿ ಕಬ್ಬಿಗಂಗೆ[4] ನೆಲನಂ ನಿರ್ವ್ಯಾಜದಿಂದಂ ನಿಮಿ ।
ರ್ಚ್ಚಿದ ಗೆಲ್ಲಂ ಭುವನೈಕರಾಮಮಹಿಪಂಗಕ್ಕುಂ ಪೆಱರ್ಗ್ಗಕ್ಕುಮೇ ॥ 173

ಅಪರಾರ್ಧಕ್ಕೆ ॥

ವೃ ॥ ಮದನವಿಭ್ರಮಲಕ್ಷ್ಮಿಗೆ ಮೂಲಂ ವಾಗ್ವಧುಗಾಯತಿ ಲೀಲೆಗಾ ।
ಸ್ಪದಮಳುಕ್ಕೆರ್ಗೆ ತಾಯುರುಸೌಭಾಗ್ಯಕ್ಕೆ ವಿಳಾಸನಿಕೇತನಂ ॥
ಮದಗಜಾಲಸಗಾಮಿನಿ ತಾನಾಕಾಮಿನಿ ಗೋಮಿನಿಯಿಂ ಮಿಗಿಲ್ ।
ಚದುರ ಪಾಱಿಯ ಸೀಳದ ಪೆಂಪಿಂದಾಸತಿಗಾರ್ ದೊರೆ ಧಾತ್ರಿಯೊಳ್ ॥ 174

ಏಕಾಕ್ಷರಪದಕ್ಕೆ ॥

ವೃ ॥ ಆಗಳ್ ಜಸಂ ಕೆಯ್ದುವನಿಕ್ಕಿ ವೀರ ।
ಶ್ರೀಗಾಣ್ಮನಮ್ ಪಾಣ್ಬತ[5]ನಕ್ಕೆಳಪ್ಪಯ್ ॥
ಪೋಗೇಕೆ ನೀಂ ಮೆಯ್ಗರೆದಿರ್ಪ್ಪಯೆಂದಾ ।
ಭೋಗೀಶ್ವರಂಗಂದು ವಿನಮ್ರನಾದಂ ॥ 175

ಸೂತ್ರಂ ॥ 40 ॥

ಧಾತುವಿಹಿತಂ ತ್ರಶಬ್ದಂ ।
ಖ್ಯಾತವಿಭಕ್ತ್ಯಂತರಂಗದೊಳ್ ನಿಲ್ಕುಂ ತಾ ॥
ನಾ[6]ತೆಱದೆ ನಿಲ್ಲದಂದುಪ ।
ಜಾತಕಾರಾದೇಶವಮಾಗಿ ನಿಯತಂ ನೆಗೞ್ಗುಂ ॥ 176

1 ಚಮರಂ. 2 ಲಕ್ಷ್ಮಿ. 3 ಗೋತ್ರ. 4 ಗನೆವಲಂ. 5 ತಳಕ್ಕೆನಪ್ಪಯ್. 6 ನೇತಱದಿಂದಲ್ಲದೊಡುಪ.

ಲಕ್ಷ್ಯಂ ||

ಕಂ || ಹೋತೃವೆನಾನಧ್ವರಿಯುಮ್ |
ಭ್ರಾತೃವೆ ನೀನುೞಿದಋತ್ವಿಜರ್ ಯಾದವರು ||
ದ್ಗಾತೃ ಶುಚಿಸಚಿವನೆನೆ ಸುರ |
ಜೇತೃವೆ ಪಶುವಾಗೆ[1]ಯಾಮೆ ಪೇೞೆವೆ ಮುನ್ನಂ || 177

ವೃ || ಆನ್ನೋಡರ್ಜುನನೆಂದನಂತಕಸುತಂ ಭರ್ತಾರನೆಂಬಾತನ[2] |
ಕ್ಕಂ ನಾನಾನ್ನವಿಪಾಕಿ ವಲ್ಲಲನವಂ ಭೀಮಂ ಹಯಾಧ್ಯಕ್ಷತಾ ||
ಸನ್ನದ್ಧಂ ನಕುಲಂ ಗವಾಧಿಕೃತನಾಸಾದೇವನಂದಾವೞಿಂ |
ದನ್ನರ್ ಕೀಚಕರ್ಕ್ಕದರ್ ಮಗಳವೊಲ್ ಸೈರಂಧ್ರಿ ಪಾಂಚಾಲನಾ || 178

ಸೂತ್ರಂ || 41 ||

ಬಿದಿಗಭಿಧಾನಂ ತಾನಂ |
ತದಾದೊಡಕ್ಕುಂ ವಿಧಾತೃಶಬ್ದಂ ರಾಂತಂ ||
ತ್ರಿದಿವಸ್ಥಿತರೊಳರಾದೇ |
ಶದಿಂದವೊಡಗೂೞಿ ವರ್ತ್ತಿಕುಂ ಪಿತೃಶಬ್ದಂ || 179

ಉದಾಹರಣೆ ||

ಪೂರ್ವಾರ್ಧಕ್ಕೆ ||

ಕಂ || ಕೆಯ್ವಾರವೇಂ ಪೊಗೞ್ತೆಯು |
ಮುಱಸ್ವಾಂಪನಿತಂದವೊಂದೆ ಸುಂದರಿಯೊರಡುಂ ||
ಮು[3]ಯ್ವಂ ಪಡೆದಗ್ಗಳಿಕೆಗೆ |
ಮೆಯ್ವೆರ್ಚ್ಚಿ ವಿಧಾತ್ರನಿ[4]ರದೆ ಮು[5]ಯ್ವಂ ನೋೞ್ಪಂ || 180

ಅಪರಾರ್ಧಕ್ಕೆ ||

ಕಂ || ಉಡುವವರುಮನುಣ್ಬರುಮಂ |
ನಡೆ ನೋಡಿ ಕನಲ್ದೊನಲ್ದು ಮುನ್ನಿನ ಭವದೊಳ್ ||
ಕು[6]ಡದರ್ ಕಣ್ಬಿಡಿನೊಳ್ ಧೃತಿ |
ಗಿಡೆ ಬಡವರ ಪಿತರರಂತೆ ಮಱುಗುತ್ತಿರ್ಕ್ಕುಂ || 181

ಸೂತ್ರಂ || 42 ||

ಶ್ವಯುಮುವಾರ್ಥ್ಯಸಖಿಯುನ್ರ್ |
ತ್ವಯುಮ[7]ನ್ವಂತಂ ಬಹುತ್ವವಿಷಯಕೃತಾದೇ ||
ಶಯುಮಿತಂ ವಿಕಲ್ಪದಿಂದಂ |
ಪ್ರಯೋಗಿಸಲ್ಪಡೆಗುಮೆಸೆವಿನಂ ಕನ್ನಡದೊಳ್ || 182

1 ಗಿನಾವೆ. 2 ನಂನಾನಾಭೋಜ್ಯ. 3 ಮುಱುಗ್ಯಂ. 4 ನರಪಿ. 5 ಮಾಱಸ್ಯಾಂತಿಪ್ಪರ್. 6 ಕದರು.
7 ಮುಮ್ಮಂತರ್.

ಪ್ರಯೋಗಂ ॥

ವೃ॥ ಶ್ವಾನಂಗಳ್ ಗಂ[1]ಧಮಾರ್ತ್ತಂಡನನತಿಹಿತದಿಂ ಕಾಪುಗೊಂಡಿರ್ದ್ದವುಗ್ರ ।
ಶ್ವಾನಂಗಳ್ ಕಂಡು ದೂರಾಂತರದೊಳವರ ಬರ್ಪ್ಪಂದಮಿಂಬಲ್ತಿದಸ್ರ ॥
ದರ್ಪ್ಪನಾರೀನಾಥನೊಳ್ ತತ್ತಱಿವ ಬವಸೆಯುಂ ಪೂ[2]ಣ್ದು ಬಂದಪ್ಪರೀತಂ ।
ಗೀನಿದ್ರಾಭಂಗಮಂ ಮಾೞ್ಪುದು ಪದನಣಮಲ್ತೆಂದು ನಿಂದಾಂತುಮಾಗಳ್ ॥ 183

ಈಯುವಾನರನವದ್ಯವಿದ್ಯರಾ ।
ವ್ಯಾಯಾಮಶುದ್ಧರವದಾತಕೀರ್ತ್ತಿಗಳ್ ॥
ತೋಯಜಾಕ್ಷಿ ನಡೆ ನೋಡ ಮನ್ಮಥ ।
ಶ್ರೀಯನಾದರಿಸಿ ನಿಂದರಿಂತಿವರ್ ॥ 184

ಕಂ॥ ಪ್ರಣುತಗುಣರೆನಿಪ ವಿಬುಧಾ ।
ಗ್ರಣಿಗಳ್ ಕೆಯ್ಕೊಂಡು ಪೊಗೞೆ ಸಲೆ ನೆಗೞ್ದವು ಧಾ ॥
ರಿಣಿಯೊಳಗೆ ನಾಗವರ್ಮ್ಮನ ।
ಗುಣವರ್ಮ್ಮನ ಶಂಖವರ್ಮ್ಮನಧ್ವಾನಂಗಳ್ ॥ 185

ಸಮವಯಸಂ ಸಮಸತ್ವಂ ।
ಸಮಾನವಿಭವಂ ಸಮಾನಶೀಲವ್ಯಸನಂ ॥
ಸಮವಿದ್ಯಾವಿಭವಯುತಂ ।
ಸ[3]ಮಸುಖದುಃಖಂ ಸಹಾಯನಕ್ಕೆ ಸಖಾಯಂ ॥ 186

ವೃ॥ ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವ್ವಪುಣ್ಯಾರ್ಜ್ಜಿತಂ ಕೇ ।
ಳೀಯಲ್ಬಂದತ್ತು[4]ದೊಂದಕ್ಷಯನಿಧಿಯೆನುತಂ ತನ್ನನೊಲ್ದಾತ್ರಿಲೋಕ[5] ॥
ಶ್ರೀಯೆಲ್ಲಂ ಪೊರ್ದ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣ್ಣಾವತಂಸಂ ।
ಶ್ರೇಯಾಂಸಂ ಪ್ರೋನ್ನತಾಂಸಃ ಸುಕವಿಜನಮನೋಮಾನಸೋತ್ತಂಸಹಂಸಂ ॥ 187

ಕಂ॥ ಅದ್ವೈತವಾದಿನಿವಹಮ ।
ದದ್ವಿರದಘಟಾವಿಪಾಟನೈಕಪಟಿಷ್ಠಂ ॥
ಸ್ಯಾದ್ವಾದಾಚಲಸಿಂಹಂ ।
ವಿದ್ವಾಂಸರ್ ಪೊಗೞೆ ವಾದಿರಾಜಂ ನೆಗೞ್ದಂ ॥ 188

ವಿಕಲ್ಪಗ್ರಹಣಕ್ಕೆ ॥

ವೃ॥ ಜ್ಯಾಯನರಣ್ಯದೊಳ್ ನೆಲಸುಗುಂ[6] ಗಡಮ[7]ಯ್ಯ ಕನೀಯನನ್ವಯ ।
ಶ್ರೀ[8]ಯೊಳಧಿಷ್ಠಿತಂ ಗಡಮಿನಾನ್ವಯಜಾತರೊಳಿನ್ನವಿನ್ನವ ॥
ನ್ಯಾಯಮವಿನ್ನವಿನ್ನವಬಳಾಮುಖರತ್ನಮವಿನ್ನವಿನ್ನವ ।
ಶ್ರೀಯಮವಿನ್ನವಿನ್ನವಕೃತಕ್ರಮವೃತ್ತಿಯನಾರೊ ಸೈರಿಪರ್ ॥ 189

1 ಕಂಡು. 2 ವಾಱ್ಪು. 3 ಸಮದುಃಖಸುಖಂ. 4 ದಿ. 5 ಕೀ. 6 ಗು. 7 ಮಯ್ಯ, ಮಯ್ಯ.
8 ಶ್ರೀಯೊ-ಳಧಿಷ್ಠಿತಂ.

## ಸೂತ್ರಂ ॥ 43 ॥

ಪಡೆಗುಂ ವಿಭಾಷೆಯಿಂದಂ ।
ಕಡೆಯೊಳದಂತತೆಯುನಸ್ವರಂ ವೃದ್ಧನವೋಲ್ ॥
ಪತೆಗುಮದರ್ಶನಮುಂ ಮೇಣ್ ।
ಪಡೆಗುಂ ದ್ವಿಬ್ಭಾವವೃತ್ತಿಯುಂ ಮೇಣ್ ಪ್ರ[1]ತಿವೋಲ್ ॥ 190

ಪ್ರಯೋಗಂ ॥

ಕಂ ॥ ಪರಿಣತವಯಸರೆವಿಱ್ಕ್ಕರ್ ।
ಱ್ಗುರುಡರೆವೆಮಗೆಂಬುಕೆಯ್ವುದುಚಿತಂ ನಿ[2]ನ್ನೀ ॥
ಗುರು ನುಡಿದ ನುಡಿಗೊಡಂಬಡು ।
ಗುರುವಚನಮ[3]ಲಂಘನೀಯಮೆಂಬುದು ಮಗನೇ ॥ 191

ಮೊದಲೊಳ್ ಚಪಲಂ ಮಱ್ಕ್ಕಟ ।
ನದು ವೃಶ್ಚಿಕದಷ್ಟನೆಂಬವೋಲ್ ನ[4]ವವಯದು ॥
ನ್ಮದಮಂ[5]ತೆ ಸುತಂ ಪಿತೃಧನ ।
ಮುದಮತ್ತಂ ಮೂಱ್ಕ್ಖನೆಂದೊಡೇನಱಿಸುವುದೋ ॥ 192

ವ್ಯವಸ್ಥಿತವಿಭಾಷೆಗೆ ॥

ವೃ ॥ ಇವಂಬುನಿಧಿಕೂಪದಿಂದಮರನಂದನಕ್ಕೇತಮೆ ।
ತ್ತವಲ್ಲಿ ಗಱಿವೆಯಾಗಲುಂ ಕಡಲ ಗುಣ್ಪುನಾರಯ್ವಲುಂ ॥
ದಿವಕ್ಕಡರಲೇಣಿಯುಂ ಸಮೆಯುಲುಂ ವಲಂ ಬಾಱಿತ್ತೆಯುಂ ।
ಬವೊಲ್ ಜಳಿದು ನಿಂದ ಪೆರ್ವ್ವಿದಿರ ಸುವ್ವಗುವ್ವೆಲ್ಲಿಯುಂ ॥ 193

ಲೋಪಕ್ಕೆ ॥

ಕಂ ॥ ಸರಿವಱಿವೆಗೆ[6]ಱಿವಂತಿರೆ ಭೋ ।
ಗ್ಗರೆದೊಮ್ಮೊದಲೆಱಗಿ ದೆಸೆಗಳೆಲ್ಲಮನೊಡನಾ ॥
ಮಱಸಿ ತರತರದೆ ನಸು ಮಸು ।
ಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ ॥ 194

ದ್ವಿಬ್ಭಾವಕ್ಕೆ ॥

ಕಂ ॥ ದಿಕ್ಕನಿತುಂ ತೋಱಿದುವು ಜ ।
ಲಕ್ಕನೆ ಮೂಕಾದಿಗಳ್ಗಮಂದತಿಲಲಿತಂ ॥
ವಾಕ್ಕಾದುವು ಕುಸುಮಿಸಿದುವು ।
ಮಿ[7]ಕ್ಕಸೆವಾಕ್ಷುಪಕಜಾತವೀರುತ್ತುಗಳುಂ 195

---

1 ಶ್ರುತಿವೋಲ್. ಶ್ರುತಿವೋಲ್. 2 [illegible]. 3 [illegible]. 4 [illegible]. 5 [illegible].
6 ಕಱಿ. 7 ಮಿಕ್ಕನವಾಕ್ಷ.

ಸೂತ್ರಂ ॥ 44 ॥

ಅನುಸಂಧಿಸಿ ಕೃತ್ಸ್ನವ್ಯಂ ।
ಜನಂಗಳಿರೆ ಮುಂದೆ ಬಿಂದು ಪರಿವರ್ತಿಸುಗುಂ ॥
ಮನದೊಳ್ ವರ್ಗಂ ಪರಮಾ ।
ಗಿ ನಿಲೆ ವಿಕಲ್ಪದೆ ತದೀಯಪಂಚಮಮಕ್ಕುಂ ॥ 196

ಪ್ರಯೋಗಂ ॥

ಪೂರ್ವಾರ್ಧಕ್ಕೆ ॥

ಕಂ ॥ ಕುಲಮುಂ ಛಲಮುಂ ವಿದ್ಯಾ ।
ಬಲಮುಂ ಶೌರ್ಯಾವಲೇಪಮುಂ ಪೊಗೞಿವೆ ನೆಲಂ ॥
ನೆಲಕೆಲ್ಲಂ ನೆಗೞ್ದಿಂ ದ್ವಿ ।
ಟ್ಕುಲಕುಲನಗದಳನಪಟುಪವಿಪ್ರತಿಮಭುಜಂ ॥ 197

ಅಪರಾರ್ಧಕ್ಕೆ ॥

ಕಂ ॥ ಪಂನಗತಳ್ಪಜ್ಞಂಸಹ ।
ರಂ ನಗಧರನಸುರಮರ್ದನಜ್ಜಾಕ್ರಿ ಮುಕು ॥
ನ್ದಂ ನ[1]ಳಿನನಾಭನೇಗೊಳ ।
ಲೆನ್ನಂ ಬಲಗರ್ವದಿಂದಿದಿಜ್ಞರ್ವನಾವಂ ॥ 198

ಇದು ಶಬ್ದಸ್ಮೃತಿಯೊಳ್ ನಾಮಪ್ರಕರಣಂ ದ್ವಿತೀಯಂ.

---

## ಸಮಾಸ ಪ್ರಕರಣಂ.

ಸೂತ್ರಂ ॥ 45 ॥

ಸಂಗತಿಯಿಂದಂ ನಾಮಪ ।
ದಂಗಳನೇಕಾರ್ಥಗತಿಯೊಳಾಗೆ ಸಮಾಸಂ ॥
ಸಂಗಳಸುಗುಂ ವಿಭಕ್ತಿಗ ।
ಣಂಗಳ್ಗಂತರದೊಳಲ್ಲಿ ಲೋಪಮದಕ್ಕುಂ ॥ 199

ಲಕ್ಷ್ಯಂ ॥

ಕಂ ॥ ಕಡುಗಾಡಿ ನಾಡೆಯುಂ ಕ[2] ।
ಣ್ಗೆಡಱೆ ಮನಂ ಪೆರ್ಚೆ ಸುತನ ಬರ್ಪಂದಂ ಜೆ ॥
ಲ್ವೊಡರಿಸಿ ಬ[3]ಲ್ವಿಡಿವಿಡಿದುದು ।
ತೊಡರ್ದಳಿಪಿಂ ನೋೞ್ಪ ನೋಟಕರ್ಕಳ ಮನಮಂ ॥ 200

*ಕೞಿದ ಮನಃಪ್ರಿಯವಿರಹದಿ ।
ನೞಲ್ದು ಬಸವೞಿದು ಮೋದೆ ತ[4]ನ್ಪುರದೊಳ್ ಬಾ ॥
ಸುೞಿ ತಳ್ಪ ಶೋಕಶಿಖಿಯಂ ।
ಕೞಲ್ಚಲೆಂದೊಟ್ಟಿದಸುಗೆದಳಿರಂ ಪೋಲ್ತ್ಕುಂ ॥ 201

---

1 ನಳಿನಾಭನನಿನಗೊಳ । ನೆನ್ನಂ, ನಳಿನಾಭನನಿನಗೊವಳ । ನೆನಂ, ನಳಿನನಾಭನೆಲೆಗೊಳ।ಲೆನ್ನಂ. 2 ಕಗ್ಗದಮಿ, ಕಗ್ಗದದ. 3 ಬಲ್ವಿಕೆ, ಬಂದೀ. * ಈ ಪದ್ಯಕ್ಕೆ ಹಿಂದೆ—ಅಲ್ಲಿ ಸಮಾಸಕ್ಕೆ—ಎಂದು ಕೆಲವು ಪ್ರತಿಗಳಲ್ಲಿ ಇದೆ. 4 ತವಮ್ಮ್ಹರ.

ಅಂತುಮಲ್ಲದೆಯುಂ ॥

ವೃ ॥ ಬಲಿಯುಮಾಂತದ ಪೇಟದೊಳ್ ಪೊಲಗೆಟ್ಟು ಪ[1]ಟ್ಟನೆ ಬಿಟ್ಟ ಕ ।
ಣ್ಮಲಗರ್ಗಳಂ ಪಾಲಿಸಿ[2]ಟ್ಟನೆಯ್ತರೆ ಕಾಯ್ದು ಸುಂಗೊಳೆ ದೈತ್ಯನಂ ॥
ಪೊಲಸುನಾಪ್ಪಿರ್ನೆಗಂ ತ್ರಿಕೂಟದಿನೊತ್ತಿ ಕೊಂದ ಕುಮಾರಿ ಕೂ ।
ತ್ತ್ರಲಸದಿಕ್ಕ್ಕಿರ್ ಭುಜಾಸಿಧಾರೆಯೊಳಂಕಮುಳ್ಳರದೇವನಾ ॥ 202

ಕಂ ॥ *ಆಜಂಬೂದ್ವೀಪಮುಹಾ ।
ರಾಜಕಿರೀಟಾನುಕಾರಿ ಚಾಮೀಕರಮಿ ॥
ಭ್ರಾಜಿತಕಟಕಮಗೇಂದ್ರಸ ।
ಮಾಜಚಮೂಚಕ್ರವರ್ತ್ತಿ ಮಂದರಶೈಲಂ ॥ 203

## ಸೂತ್ರಂ ॥ 46 ॥

ಉತ್ತರಪದದರ್ತ್ಥಂ ಮೆ ।
ಯ್ವೆತ್ತಿರೆ ತತ್ಪುರುಷಮಂತದೇಕಾಶ್ರಯಮಾ ॥
ಗುತ್ತುಮಿರೆ ಕರ್ಮ್ಮಧಾರಯ ।
ಮೆ[3]ತ್ತಂ ದ್ವಿಗುಸಂಜ್ಞಮಕುಮೆ ಸಂಖ್ಯಾದಿಪದಂ ॥ 204

ಪ್ರಯೋಗಂ ॥

ತತ್ಪುರುಷಕ್ಕೆ ॥

ವೃ ॥ ಅರಮನೆಗಲ್ತು ಸೂಳೆಮನೆಗಲ್ತು ಸವಣ್ಣನೆಗಲ್ತು ಕೂಡೆ ಬ ।
ಲ್ಲರ ಬಗೆಗಲ್ತು ವಸ್ತುಕೃತಿಯುಂ ಸಲೆ ಪೇಱ್ವುದು ಕಲ್ತು ಪೇಱದಂ ॥
ದರಮನೆಗಲ್ತು ಸೂಳೆಮನೆಗಲ್ತು ಸವಣ್ಣನೆಗಲ್ತು ಕೂಡೆ ಬ ।
ಲ್ಲರ ಬಗೆಗಲ್ತದಾವೆಡೆಗಮುಲ್ತದು ಕಲ್ಪಿ ವಲಂ ಕವೀಂದ್ರರಾ ॥ 205

ಕರ್ಮ್ಮಧಾರಯಕ್ಕೆ ॥

ವೃ ॥ ಅಲರ್ಗಣ್ ಪೊಂಗಿದ ಲಾ[4]ಳೆವಾಯ್ ನಗೆಮೊಗಂ ತೊಂಗಲ್ಗುರುಳ್ ಕೆಂಪಳಂ ।
ಸುಲಿಪಲ್ ಸೋರ್ಮ್ಮುಡಿ ತಳ್ಪಸಿಱ್ ಪೆಱೆನೊಸಲ್ ಪೊಂಬಾಳೆಪಚ್ಚೋಲೆ ನೇ ॥
ಱಲ ಪಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೂಯ್ದಂತಪ್ಪ ನುಣ್ಗುರ್ಪ್ಪೆ ಪೆ ।
ರ್ಮ್ಮಲೆ ಚೆಲ್ವಾಗಿರೆ ನಿಂದ ಪೇಱತಿಯುರಂ ಕಂಡಂ ಮಹೀವಲ್ಲಭಂ ॥ 206

ದ್ವಿಗುವಿಂಗೆ ॥

ಕಂ ॥ ಇರ್ವ್ವರ್ಳ್ ಮೂವಾಳ್ಕೆ ।
ದ್ದರ್ಗ್ಗರ್ವ್ವರೆಯೊಳ್ ಪ[5]ಳಗೆ ಸಾರೆ ಕೊಳೆ ಪದವೞಿಗಳ್ ॥
ಕರ್ವ್ವಿನ ಮಡಲಂತೆ ಕವ ।
ಲ್ತುರ್ವ್ವಿದ ಕೆಯ್ವೊಲಗಳಸಿಗು[6]ವೋರ್ಗೊಂದೆಡೆ ಪೊಳ್ ॥ 207

1 ಪಕ್ಕನೆ. 2 ಪಱಿನೆಯ್ತರೆ. * ಈ ಪದ್ಯವು ಕೆಲವು ಪ್ರತಿಗಳಲ್ಲಿ ಇಲ್ಲ. 3 ಮಿಗೆ. 4 ಲೋಲೆ.
5 ಬೆವಗೆರಾಳೆ. 6 ದುಖೋ.

## ಸೂತ್ರಂ ॥ 47 ॥

ದ್ವಿಪದಂ ಮೇಣ್ ಬಹುಪದಮು ।
ನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ ಸಮು ॥
ಸ್ತಪ[1]ದಾರ್ಥಂ ದ್ವಂದ್ವಂ ಪೂ ।
ರ್ವಪದಪ್ರಾಧಾನ್ಯಮವ್ಯಯೀಭಾ[2]ವಾಖ್ಯಂ ॥ 208

ಪ್ರಯೋಗಂ ॥

ಬಹುವ್ರೀಹಿಗೆ ॥

ಕಂ ॥ ಕುಡುವಿಲ್ಲನೆಕ್ಕೆ ಸರಲುಂ ।
ನಡದು ದಲಂದೊರ್ವನೆರ್ದೆಯನೊಳ್ಗಬ್ಬಮುವೊ ॥
ಳ್ನುಡಿಯುಂ ಗೇಯಮುಮುಳ್ಳರ್ದ ।
ಕಡುಗಲ್ಲೆರ್ದೆಯೆರ್ದೆಯನಂಬು ಮೇಣುಚ್ಚುರ್ಗುವೇ ॥ 209

ಪಟ್ಟುಕಮೂಗಿನ ಮ[3]ರವುಲಿ ।
ವೊಟ್ಟೆಯ ಕುಸಿಗೊರಲ ಕೆಂ[4]ಚುದಲೆನವಿರ ಕ[5]ರಂ ॥
ಕೆಟ್ಟೊಡೆದ ಸ[6]ರದವಂ ಕ[7]ಡೆ ।
ಪಟ್ಟು ಮನಂಗೆಟ್ಟು ನಾಡುನಾಡಂ ತಿರಿಗುಂ ॥ 210

ದ್ವಂದ್ವಕ್ಕೆ ॥

ಕಂ ॥ ಕಱೆಮಱೆಗಳೊಳವು ನೋೞ್ಪೊಡೆ ।
ಪೆಱಪೆಱರ ಕುಲಕ್ಕೆ ಕೊಂಡಕೊಟ್ಟೆಡೆಗಳೊಳಂ ॥
ಕಱೆಯಿಲ್ಲ ತೈಲನಲ್ಲದೆ ।
ಪೆಱನಾವೊಂ ಪಿ[8]ಕ್ಕ ನೋೞ್ಪೊಡಿತ್ತಲೆಗೋಜಂ ॥ 211

ವೃ ॥ ತೊಱಗೆಲೆ ಱಟ್ಟಹಳ್ಳಿ ನೆಗೞ್ದಜರಗೋಳಮೆನಿಪ್ಪಗುರ್ವವೆ ।
ತ್ತಱಿಕೆಯ ಪೇಡವಟ್ಟುಗಳ ಬೂತುಗಬೀರುಗಗೋ[9]ಯೆಯಕ್ಕರಳಂ ॥
ನೆಱೆಯರನಿಪ್ಪೊಡಂ ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ।
ಪೆ[10]ಱರಳವಲ್ಲುವಂ ಕಿಡಿಸಿತೊಟ್ಟಜೆ ತೈಲಪಚಕ್ರವರ್ತಿಯಾ ॥ 212

ಅವ್ಯಯೀಭಾವಕ್ಕೆ ॥

ಕಂ ॥ ಸಂತಂ ಕಿಟ್ಕೆಱೆಗಳೊಳೋ ।
ರಂತಿರೆ ಕೆಯ್ಗಾವಮಳ್ದರಂ ನೋೞ್ಪವರಂ ॥
ಮಿಂತಲೆವಾಯ್ತರೆ ಪೊಱಮು ।
ಯ್ಯಂ ತಾಗಿರೆ ತಗೆದು ಮದನನಾರ್ದ್ದಿಸುತಿರ್ಪ್ಪಂ ॥ 213

---

1 ಪದಾರ್ಥ ದ್ವಂದ್ವಂ. 2 ಭಾವಾತ್ರಂ. 3 ಮರದುಲಿ । ದೊಟ್ಟಱು. 4 ಕೆಂದಲೆಯುನವಿರ. 5 ಕರ್ಪಂ. 6 ಸರದವ. 7 ಬಗೆ । ಗಟ್ಟು. 8 ಬಕ್ಕರ. 9 ಗೋೞೆ. 10 ಪೆಱರಳವಲ್ಲವಂ ಕಿಡಿಸಿದೊಟ್ಟಜೆ.

## ಸೂತ್ರಂ ॥ 48 ॥

ಪತ್ತಿರೆ ಕಾರಕದೊಳ್ ಮುಂ।
ದೊತ್ತಿ ಸಮರ್ತ್ಥಕ್ರಿಯಾಪದಂ ಪದವಿಧಿ ತಾ॥
ನೊತ್ತರಿಸುಗುಮುದಱೊಳ್ ತ।
ಳ್ತ್ತಮದಂತಕ್ಕೆ ಬಿಂದು ಸಂದಿಸಿ ನಿಲ್ಕುಂ॥ 214

ಪ್ರಯೋಗಂ॥

ಕಂ॥ ಊ[1]ರೇಱಲ್ ಮನೆಮಾಡ।
ಲ್ಕಾರಂಬಂಗೆಯ್ಯಲೆೞ್ತುಗೊಳಲಾೞಾೞ[2]॥
ಲ್ಕಾರಾಮುಮಿಡಲ್ಕೆಂದುಂ।
ದಾರುಣತಾರೆಗಳನಱಿಯೆ ಪೇಱವಱೊಳುಚಿತಂ॥ 215

## ಸೂತ್ರಂ ॥ 49 ॥

ಉತ್ತರಪದಂ ವಿಶೇಷ್ಯದೊ।
ಳೊತ್ತರಿಸಿರೆ ಪೂರ್ವ್ವಪದದುಪಾಂತ್ಯಸ್ವರದಿಂ॥
ದತ್ತಿರ್ದ್ದವರ್ಕ್ಕೆ ಲೋಪಂ।
ಮತ್ತಮಿಕಾರಕ್ಕೆ ಬಹುಳಮುಕ್ಕುಮೆಕಾರಂ॥ 216

ಪ್ರಯೋಗಂ॥

ಕಂ॥ ಪೆರ್ಮ್ಮರನನಡರ್ದ ವನಲತೆ।
ಕಾರ್ಮ್ಮುಗಿಲಂ ತಳ್ತು ಮಿಂಚು ವಿಂಧ್ಯಾಚಲಮಂ॥
ನೆರ್ಮ್ಮದ ನರ್ಮ್ಮದೆಯೆನಿಸಿದ।
ಳೊರ್ಮ್ಮೆಯೆ ವನಚರನನಪ್ಪಿ ವನಚರಿಯೊರ್ವ್ವಳ್॥ 217

ಬಹುಳಗ್ರಹಣಕ್ಕೆ॥

ಕಂ॥ ಪಣ್ಗಾಯೆ ತಳ್ತು ತುಱುಂಗಲ।
ಬಿಣ್ಗೊನೆಯಿಂ ತೂಗಿ ತೊನೆವ ಕೌಂಗಂ ತನ್ನ॥
ತ್ತಣ್ಗೆ ಬರೆ ತೆಗೆವ ತೆಱದಿಂ।
ಕಣ್ಗೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ॥ 218

## ಸೂತ್ರಂ ॥ 50 ॥

ಸ್ವರಮಾದಿಯಪ್ಪವವು ಮುಂ।
ತಿರೆ ದೀರ್ಗ್ಘಂ ಮೊದಲೊಳಗುರುಗಳ್ಕುಂ ತದಮಾಂ॥
ತರದೊಳ್ ಣಟಳನತಂಗಳ್।
ದೊರೆಕೊಳೆ ತಳೆಗುಂ ದ್ವಿರುಕ್ತಿಯುಂ ಬಹುಳತೆಯಿಂ॥ 219

---

1 ಊರಕಱಲ್. 2 ಗ.

ಪ್ರಯೋಗಂ ॥

ಪೂರ್ವಾರ್ದ್ಧಕ್ಕೆ ॥

ಕಂ॥ ಕಾಱೊಸಡುಂ ಕರ್ಬ್ಬುರ್ಗಯುಂ ।
ಪೇಱೊಡಲುಂ ತೊಳಪ ದಾಡೆಯುಂ ಪೆರ್ಬ್ಬುಸಿಱುಂ ॥
ಕ್ರೂರೇಕ್ಷಣಮುಂ ದನುಜಾ ।
ಕಾ[1]ರಮನೊಡರಿಸೆ ನಿಶಾಟರರ್ವ್ವಿಸಿ ತೋರ್ಪ್ಪರ್ ॥ 220

ಅಗುರುಗ್ರಹಣಕ್ಕೆ ॥

ವೃ ॥ ಮೇಲುದಂ ಮಱೆದು ಮೆಯ್ಮಱೆದೊರ್ವ್ವಳೊಱಲ್ದು ಮುಂ।
ಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟು ಪ ॥
ಚ್ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧೆ ಭೂ ।
ಪಾಲನಂದನನನಂದರುಣಾಧರೆ ನೋಡಿದಳ್ ॥ 221

ಣಕಾರಕ್ಕೆ ॥

ಕಂ॥ ಪಣ್ಣನೆ ತೊಱಲ್ದು ತೀಡುವ ।
ತಣ್ಣೆಲರೊಳೆಲರ್ಚ್ಚಿ ವನಚರವ್ರಜಮದಱೊಳ್ ॥
ತಣ್ಣನೆ ತಣಿದಿರೆ ಬ[2]ನದೊಳೆ ।
ಪಣ್ಣನೆ ತಿನುತಿರ್ಪ್ಪವೆಳಸಿ ತರುಚರಕುಳಮುಂ ॥ 222

ಟಕಾರಕ್ಕೆ ॥

ಕಂ ॥ ನಿಟ್ಟೆಯೆಯ್ದಿಯಾಗು ಪ[3]ತಿಯೊಳ್ ।
ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ ॥
ನಿಟ್ಟಾಯುಮಾಗು ನೀನೆಂ ।
ದಿಟ್ಟರ್ ಸೇಸೆಯನಗಣ್ಯಪುಣ್ಯಾಂಗನೆಯರ್ ॥ 223

ಳಕಾರಕ್ಕೆ ॥

ಕಂ ॥ ಅಳ್ಕಿಡಿ ನರನ ಕೂರ್ಗ್ಗಣೆ ।
ಯುಳ್ಳೀಱಿಂಗಳ್ಕಿ ಬಳ್ಕಿ ಕುರುಬಲಮೆಲ್ಲಂ ॥
ಬೆಳ್ಳಿಟಮೋಡೆ ನ[4]ನಿ ।
ಸೊಳ್ಕಳೆಡೆಗೋದನೊದಱೆ ಚಟ್ಟನೊಳೊವಜಂ ॥ 224

ನಕಾರಕ್ಕೆ ॥

ಕಂ ॥ ಇನಿಯಳ ತ[1]ನಿಸೊಂ[5]ಕಿನ್ನಣಿ ।
ಸನೆ ಮಾಲ್ಯಾಭರಣಲೇಪನಂ ತಂಬುಲಮೆಂ ॥
ಬಿನಿತುಂ ರಾಗಮನಾಗಿಸೆ ।
ಮನದೊಳ್ ದಿವಿಜೇಂದ್ರವಿಭವದಿಂ ಸುಖಮಿರ್ದ್ದಂ ॥ 225

---

1 ಕಾರವಮುನೊಡರಿಸೆ. 2 ಬೀನಂ. 3 ಪತಿಗೊ। ತೊಟ್ಟನುವಶೆ. 4 ತಳ. 5 ನೊಂಕಿನ್ನಣ.

ತಕಾರಕ್ಕೆ ॥

ವೃ ॥ ಮಡದೊಳಗೊಂದುವುದೆತ್ತ ಕಿತ್ತಡಿಗಳ್ಗೆ ನಿಪ್ಪತ್ತೊಳಪ್ಪುವಾ ।
ಮಡದೊಳಗೊಂದಿಯೆ ನಿಂದ ಕಿತ್ತಡಿಗಳ್ಗೆ ನಿತ್ಯನಿಯಾಮದಿಂ ॥
ಪೊಡೆವಡಿಂಗಡಿವೆಂದು ನೀಱರನೊಱಱು ಸಾ[1]ಱುವ ಮಾಟಕ್ಕೆಯಿಂ ।
ಪೊಡೆವ ಡಿಂಡಿಮಮೆಂಬಿನಂ ಕಳನೂಪುರಧ್ವನಿ ಪೊಣ್ಮುಗುಂ ॥ 226

ಬಹುಳಗ್ರಹಣಕ್ಕೆ ॥

ಕಂ ॥ ಅಂಚೆಯುರಗಿೞಯು ಪುರುೞಯು ।
ಕೊಂಚೆಯು ಕೋಗಿಲೆಯು ನವಿಲ ಪಾರಾವತದೊಂ ॥
ದಿಂಚರದಿಂದಂ ಶಬ್ದಾ ।
ತ್ಮಂ ಚರಮಚರಂ ಜಗಂ ದಲೆನಿಸಿದುದು ಬನಂ ॥ 227

## ಸೂತ್ರಂ ॥ 51 ॥

ಕಡಿದು ನಿಡಿದೆಂಬಿವೆರಡಱ ।
ಕಡೆಯೊಳ್ ಟತ್ವಂ ತಕಾರಮಕ್ಕುಂ ಕಿಱಿದಿಂ ॥
ಬೆಡೆಯೊಳ್ ಸ್ವರಮಿರೆ ತಾಮುವು ।
ಪಡೆಗುಮುಕಾರಾಂತಭಾವಮಂ ವ್ಯಂಜನದೊಳ್ ॥ 228

ಪ್ರಯೋಗಂ ॥

ಕಂ ॥ ಕಟ್ಟಾಯುದ ಕಣೆ ಪೆಂಪಿನ ।
ಕಟ್ಟಳೆ ಚಾ[2]ವಟದ ಮೇರು ನನ್ನಿಯ ತವರೂರ್ ॥
ನೆಟ್ಟನೆನಿಸಿದ ಜಸಂ ನೇ ।
ರ್ವಟ್ಟರ[3] ನಿಟ್ಟಾಯುವಕ್ಕೆ ದುಟ್ಟತ[4]ಳಕ್ಕಂ ॥ 229

ಬಾಱಿಸೆಯು ಜಜ್ಝರದ ಕಿ ।
ತ್ತಿಱಿಸೆಯು ಕರ್ಮ್ಮರದ ಮಾವಿನರಸೇಱಿಲ ಕಂ ॥
ಚೇಱಿಸೆಯು ಪಲಸಿನ ಮರದಿಂ ।
ನೂಱಿದುಮೆಸೆದ[5]ಕ್ಕುರಮುದಱ ಬಹಿರುದ್ಯಾನಂ ॥ 230

ಉದಂತಕ್ಕೆ ॥

ಕಂ ॥ ತೊ[6]ಡೆಯಿಂ ಕಡುಗುದುರೆಗಳಂ ।
ಮಡಪಿಂ ನ[7]ಡುಪಟ್ಟ ದಂತಿಯುಂ ನಿಡುದೋೞಂ ॥
ಕಡುವಾಳಂ ಕೂರಸಿಯಿಂ ।
ಕಡಂಗಿದ[8]ಣಿಯುಂ ಸಮಂತು ಬಸದಾ[9]ಗಿಸುವಂ ॥ 231

---

1 ನಾಱಿರ. 2 ಚಾಳಿನದವೇಗ. 3 ರವಿಬ್ಬ್ಯ. 4 [illegible]. 5 ದಿದ್ರುಗದದಱ.
6 ಉಡಯಿಂ. 7 ನಡ. 8 ದಾ. 9 ಮಾ.

ಕಂ ॥ ಕಿಱುನೆಲೆಯ ಲತಾಲಲಿತೆಗೆ ।
ತಿಱಿದುಕೊ[1]ಳಲ್ಕಪ್ಪ ಸಾಕ್ಕೆರ್ಯೊಳ್ಗೊಂಬುಗಳೊಳ್ ॥
ತುಱುಗಿದ ತಳಿರಿಂ ನನೆಯಿಂ ।
ಕಿಱುವಿಡಿಯಿಂದೆಸೆದುದಸದಳಂ ಮಾಕಂದಂ ॥ 232

ಸೂತ್ರಂ ॥ 52 ॥

ಪೆಚ್ಚನೆಯುಂ ಕೆಚ್ಚನೆಯುಂ ।
ಬೆಚ್ಚನೆಯುಮೆನಿಪ್ಪ ಶಬ್ದದಂತಕ್ಕಕ್ಕುಂ ॥
ಬೆಚ್ಚಂತಿರೆ ಮತ್ವಂ ಕೆಲ ।
ರಿಚ್ಚೆಯಿಪರ್ ಸ್ವಂತಮುಮನಿ[2]ಕಾರ್ಯೆತ್ವಮುಮಂ ॥ 233

ಪ್ರಯೋಗಂ ॥

ಮತ್ವಕ್ಕೆ ॥

ಕಂ ॥ ಪಂದಳಿರ ತೋರಣಂ ತ ।
ಳ್ತೊಂದಿದ ಕೆಂಗುಡಿಯ ಪುದಿವು ಮುತ್ತಿನ ಕ[3]ಡೆ ಚೆ ॥
ಲ್ವಂದೆಸೆವ ಮಂಗಳಾನಕ ।
ದೊಂದು ರವಂ ಬಗೆಗೆ ವಂದುದಂದರಮನೆಯೊಳ್ ॥ 234

ಎನಿತುಂ ಕಾಯ್ದುಂ ಪೆಂನೀರ್ ।
ಮನೆಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ ॥
ಮನದೊಳ್ ಪೊ[4]ಲ್ಲದನೆಂತುಂ ।
ನೆನೆಯರಿ[5]ದಂ ನಂಬು ಕುರುಕುಲಾಂಬರಭಾನೂ ॥ 235

ಸ್ವಂತಕ್ಕೆ ॥

ಕಂ ॥ ಪಸುರ್ಪೊನ್ನ ಜಗಲಿ ಪಚ್ಚೆಯ ।
ಪಸುರ್ವಂವರ್ ಮುತ್ತಿನಕ್ಕಿ ನೀಲದ ಜಾಗಂ ॥
ಕಿಸುಗಲ್ಲರುಣಸರೋರುಹ ।
ಮೆಸೆದಿರ್ದ್ದುವು ರಾತ್ರಿಸುತಿಯ ಬೀಡಿನೊಳೆತ್ತಂ ॥ 236

ವಾಸರಪತಿ ಬಿಸುಗದಿರಿಂ ।
ಪೇಸದೆ ತವೆ ಪೀರ್ಗ್ಗವೆಂಬ ಮುಱುಕದೊಳಂಭೋ ॥
ಜಾಸನನಂಬುಜವನಮಂ ।
ಬಾಸಣಿಸಿದನೆನಿಪುವಿ[6]ಡಿದ ತಾವರೆಯೆಲೆಗಳ್ ॥ 237

* ಪಿತ್ವಕ್ಕೆ ॥

ಕಂ ॥ ಪೇಸಱಿಸುವಂಗಜಾಗ್ನಿಯ ।
ಕೇಸುರಿ ಕೊಳೆ ಕಱಿದ ಪತಿಯ ವಿರಹದಿನಾಗಳ್ ॥
ಕೀಸುಗಳೆದಂ[7]ತೆ ಕಡಗವ ।
ನಾಸತಿ ಕಳೆದಿತ್ತಳಾತ್ತ್ರಕರಪಲ್ಲವದಿಂ ॥ 238

1 ಕೊಳಲಿಬಪ್ಪ. 2 ನೆಕಾರತ್ವ. 3 ಕೊಡೆ. 4 ಪೊಲ್ಲಮ. 5 ರದಂ. 6 ಪಸಿತ. * ಇದಕ್ಕೆ ಪ್ರತಿಯಾಗಿ—ಯೋಗ ವಿಭಾಗದಿಂ ಕೇವಲಸ್ವಂತಕ್ಕುದಾಹರಣೆ—ಎಂದು ಪ್ರತಿಗಳಲ್ಲಿದೆ. 7 ವಂತೆ.

## ಸೂತ್ರಂ ॥ 53 ॥

ಪೊ[1]ಸತು ಪೞದೆಳದು ಪೊಱಗೊಳ ।
ಗು ಸಮಮೆನಿಪ್ಪಿ[2]ವಱೊಳತ್ವಮಂತಕ್ಕೆ ನಿಪಂ ॥
ತಿಸೆಪಡೆಗುಮವಱೊಳೞಗಿಂ ।
ಗಸಂಗದಿಂ ಸಮನಿಸಿಕ್ಕುರ್ಗವುಳ್ಳಾದೇಶಂ ॥ 239

ಪ್ರಯೋಗಂ ॥

ಕಂ ॥ ಪೊಸದೇಸೆಯುಂ ಪೆಡಂಗಂ ।
ರಸಪುಷ್ಟಿಯುನರ್ಥಸೃಷ್ಟಿಯುಂ ಬಗೆವರೆ ಭಾ ॥
ವಿಸುವರೆ ಸಾ[3]ರಣಿಗೆಯುವ್ರೋಲ್ ।
ಕಸವನೆ ಪಿ[4]ಡಿವರ್ ಕೆಲರ್ ಮಹಾಪುರುಷರ್ಕ್ಗಳ್ ॥ 240

ತುೞಕಲಡುಗೆಗಳೊಳೇಂ ಪೞ ।
ಗೞವೆಯ ಕೂೞ ತಿವುಡುಗಳೆದ ತೊವರಿಯ ತೊವೆ ಕಾ ॥
ಯ್ದೆಱಪಿ[5]ದ ತುಪ್ಪಂ ಕೋಸುವ ।
ಕೞಲಲ್ಲದೆ ದಿವ್ಯಭೋಜನಂ ಪೆ[6]ಱತುಂಟೇ ॥ 241

ಎಳದಳಿರ ತುಱುಗಲೊಳ್ ನೆಱೆ ।
ದಳದಳಿಪೆಳಮಾವಿನಳ್ಳೆಗೊಂಬಂ ತಳ್ತು ॥
ಯ್ದೆಳಸಿದ ವಸಂತದೂತಿಯು ।
ಮಿಳಿರ್ವುಱ್ಯಲನಾಡುವಬಲೆ ಪಾಡಿದಳೊರ್ವ್ವಳ್ ॥ 242

ಅಳವಿಗೞದುರುನಿತಂಬ ।
ಸ್ಥಳಭಾರವನಾಂತ ಕಾಲ್ಗೆ ಪೊಱ ಅ[7]ಡಿಗಳೊಳೇ ॥
ಲಳಿತತುಳಾಕೋಟಿಗಳಂ ।
ತಳೆವುದದೇವಿರಿದೊ ಮದಗಜಾಲಸಗತಿಯಾ ॥ 243

ಬಳಕೆಯ್ಯೊಳಿರ್ದ್ದ ಪಲ್ಗಿರಿ ।
ದೊಳವಾಲಂಗೊಂಡು ಮೊರೆವ ಭಷಕನ ತೆಱದಿಂ ॥
ದೊಳಪೊಕ್ಕು ದುರ್ಗ್ಗಮಂ ಸಂ[8] ।
ಚಳಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯಂ ॥ 244

ಸಮಸು[9]ತಿಯೊಳೊಂದಿದೊಳ್ಪಿನ ।
ರಮಣೀರಮಣೀಯಗೇಯಮಾಸ್ಥಾಯಿಕೆಯೊಳ್ ॥
ಸಮಸಂದಮರ್ದಿನ ಸರಿವಱೆ ।
ಸಮಂತು ಕ[10]ಱೆದಪ್ಪುದೆಂಬಿನಂ ರಂಜಿಸುಗುಂ ॥ 245

1 [illegible] 2 ಪ್ಪ. 3 [illegible] 4 [illegible] 5 [illegible] 6 [illegible] 7 ಮಱ.
8 ಚಂ. 9 ಸ್ಮೃತಿ, ಶ್ರುತಿ. 10 ಕಱೆದಪ್ಪುವೆಂಬಿನಂ.

ಕಂ॥ ಬಳಗುಳ್ಳೇವಣಮುಮರ್ದಿರೆ ।
ಚ[1]ಳನಂ ಪೊಱಗೆಸೆಯೆ ಬೆಳಪನೆಯ್ದುವ ಪೆಳಗಂ ॥
ಪೊಳೆವ ಸುಲಿವಲ್ಲೆ ಮಸುಳಿಸೆ ।
ವಿಳಾಸದಿಂ ದರ್ಭಕಶಯನತಳಗತನಾದಂ ॥ 246

## ಸೂತ್ರಂ ॥ 54 ॥

ತತ್ಪುರುಷಸಮಾಸದೊಳು ।
ದ್ಯುತ್ಪೂರ್ವಪದಾಂತ್ಯಲೋಪಮಕ್ಕುಂ ಪ್ರಚುರಂ ॥
ವ್ಯುತ್ಪಾದಿಸಲ್ಕೆ ಪಡೆಗುಂ ।
ತತ್ಪರದೊಳ್ಬೞಿಯಮುಚಿತವರ್ಣಾಗಮಮುಂ ॥ 247

ಪ್ರಯೋಗಂ ॥

ಕಂ॥ ಅರನೇಱಿಲ ಪೊಂಬೂಱಿರೆಯು ।
ಸುರಯಿಯ ಮಾಮರದ ಬಕ್ಕೆವಲಸಿನ ಪುದುವಿಂ ॥
ಪ[2]ರೆದುಬ್ಬಿದ ಕಱ್ತಲೆ ದಿನ ।
ಕರಾಂಶುಗಳ್ಗಂ ವಿಭೇದಿಸಲ್ಕರಿದದಱೊಳ್ ॥ 248

ಪ್ರಚುರಗ್ರಹಣಕ್ಕೆ ॥

ಕಂ॥ ಅರಸುಗುಣಂಗಳನತಿಭೀ ।
ಕರಕಾಂತಂಗಳನವಂ ವಿಯಚ್ಚರರಾಜಂ ॥
ಧರಿಯಿಸಿದಂ ಜಳನಿಧಿ ಜಳ ।
ಚರಚಯಮುಮಂ ರತ್ನಚಯಮುಮಂ ಧರಿಯಿಪವೊಲ್ ॥ 249

ಪರಾರ್ಧಕ್ಕೆ ॥

ಕಂ॥ ಮಾಂಗಾಯ ಗೊಂಚಲೊಳಗುೞಿ ।
ದಿಂಗೊರಲಿಂದುಲಿವ ಗಣ್ಡುಗೋಗಿಲೆಗ[3]ಳರ ॥
ಲ್ದೊಂಗಲ ನಿಱಿದಳಿರೊಳಗೆ ಜಿ ।
ನುಂಗುವ ಪೆಣ್ದುಂಬಿಗಳುಮಳುಂಬಂ ಬನದೊಳ್ ॥ 250

## ಸೂತ್ರಂ ॥ 55 ॥

ಪ್ರಾಯಿಕಮಕ್ಕುಂ ದೀರ್ಘ ।
ನ್ಯಾಯಮದಂತೆಲ್ಲಶಬ್ದದೊಳ್ವೃತ್ತಿಗತಂ ॥
ಮಾಯೆಂಬುದು ಮಹಿಮಾಭಿ ।
ಪ್ರಾಯದೊಳೊಂದಿರ್ಕ್ಕವೊಂದಿ ಮ[4]ಹತೆಂಬುದಱೊಳ್ ॥ 251

1 ಚಳನೊಂ. 2 ಪರಿದು. 3 ಯುಮಲ॥ ದೊಗ್ಲ್ರ. 4 ಮಹದಂ, ಮಹವೆಂ.

ಪ್ರಯೋಗಂ ||

ವೃ || ಬಲ್ಲಂತೆಂತುಂ ಗುಣಮನೊಳಕೆ[1]ಯ್ದಾಪ್ಪರ್ನಾಪ್ಪರ್ಂದವಿಂದಿ |
ನ್ನೆಲ್ಲಿರ್ದ್ದುರ್ಂ ಪೊಲ್ಲಮೆಯನುಗುಗೆಂಬುಕ್ತಿಯಂ ನಸ್ನಿ ಮಾಳ್ಪಂ ||
ತೆಲ್ಲಾ ರ[2]ತ್ನಂಗಳುಮನೊಳಕೊಂಡೊಳ್ಸನಂಭೋಧಿ ಲೋಕ |
ಕ್ಕೆಲ್ಲಂ ಬೀಱಲ್ ಪೊಱಗೆ ಕಸಮಂ ಸಿಪ್ಪೆ ಮಾಡುತಿಕ್ಕುರ್ಂ || 252

ಪ್ರಾಯೋಗ್ರಹಣಕ್ಕೆ ||

ಕಂ || ಎಲ್ಲಂಗಮೆಲ್ಲಧನಮುಮ |
ನೆಲ್ಲೆಡೆಯೊಳಮೆಲ್ಲತೆಱದೊಳಂ ಕುಡುಗೆಮ ಸಿ ||
ಲ್ಕಿಲ್ಲದೆ ಬವರದೊಳೇಂ ಗಳ |
ಗೆಲ್ಲಂಗುಡದಿರ್ಕ್ಕೆ ಪೊಣದೊರ್ಡಾಗ್ರರ್ಂ ಗಂಡಂ || 253

ಉತ್ತರಾರ್ದ್ಧಕ್ಕೆ ||

ಕಂ || ಮಾದೇವನುಮಾದೇವಿಗೆ |
ಸಾದರದಿಂ ಪೇ[3]ಳ್ದಿನೀತನುತ್ತಮಸತ್ವಂ ||
ಮಾದಾನಿ ಶೌ[4]ರ್ಯ್ಯಧನನುದಿ |
ತೋದಿತಪುಣ್ಯಂ ಹರಿಪ್ರಿಯಂ ನರನೆಂಬಂ || 254

## ಸೂತ್ರಂ || 56 ||

ಪರಿಗದಿತಬಹುವ್ರೀಹಿಗೆ |
ಚರಮದೊಳಕ್ಕುಂ ಯಥಾಪ್ರ[5]ಯೋಗಮಕಾರಂ ||
ಪರಪದಮಿಲ್ಲೆಂ[6]ಬೊಂದಿದು |
ದೊರೆಕೊಂಡಿರೆ[7]ಲಿತ್ವಮಂತ್ಯವರ್ಣ್ಣಕ್ಕ[8]ಕ್ಕುಂ || 255

ಪ್ರಯೋಗಂ ||

ಕಂ || ಬಲ್ದಲೆಯಂ ತೋಳ್ನೀಳ್ದನ |
ಗಲ್ದುರದಂ ಬಟ್ಟದೊಡೆಯುಮಂ ಕೆಂಗಣ್ಣಂ ||
ನೇಲ್ದ ಕಿವಿಯಾತನೆನಿಸುವ |
ನೊಲ್ದೊಲಿಸುಗುಮೆಸೆವ ಪೇರಸಿರಿಯಂ ಧುರದೊಳ್ || 256

ಉತ್ತರಾರ್ದ್ಧಕ್ಕೆ |

ಕಂ || ಸೊಗಯಿಸುಗುಮೆ ಪಲ್ಲಿಲಿ ಪಾ |
ಯ್[9]ಗಿಲಿಲಿ ಗಂಧಂ ಸಮಂತು ಕೂರಿಲಿ ಕುಡುಗೋ ||
ಲ್ಮಿಗೆ ನಾಣಿಲಿಯೆನಿಸುವ ವಧು |
ನಗೆಗೆಡೆಯಕ್ಕುಂ ಸಮಸ್ತಜಗತೀತಳದೊಳ್ || 257

---

1 ಕೊಳಗ್ಗಪ್ಪರ್. 2 ಲೋಕಂ. 3 ಪೇಲ್ಬ್ಬವಿನಾತ. 4 ಕಾರ್ಯ್ಯದರ. 5 ಪ್ರಕಾರ. 6 ಬಿಂತಿವ. 7 ದೆಕ್ಕ. 8 ದೊಳಕ್ಕುಂ. 9 ಪಗಲಿಲಿವಣ್ಣಂ.

## ಸೂತ್ರಂ ॥ 57 ॥

ಬಂದೆಂಬುದರ್ಕ್ಕೆ ರೇಫಂ ।
ಸಂದಿಸುಗುಂ ಕಡೆಯೊಳೆರಡೆನಿಪ್ಪುದಱೊಳ್ತಾ ॥
ನೊಂದಿ ನೆಲಸುಗುವಿರಾದೇ ।
ಶಂ ದಲ್ಕ್ರೇಣ್ಕ್ರೇಣುಕಾರಲೋಪಮದಕ್ಕುಂ ॥ 258

ಪ್ರಯೋಗಂ ॥

ಕಂ ॥ ಓರೆಂಜಲೊಗ್ಗಪ್ಪರ್ಂತಿಗೆ ।
ವಾರದ ಖಳರೊಡನೆ ಬೆರಸಿ ಮೇ[1]ಳಂಗೊಂಡಂ ॥
ದಾರುಂ ಲಘುವಪ್ಪರ್ಪ್ಪ ।
ಸ್ತಾರದೊಳವರ್ದೆಂಬ ಶಿಥಿಲಸಂಯೋಗದವ್ರೊಲ್ ॥ 259

ಇವರ್ಮ್ಮಯ್ಗ್ಗಂ ಹಿತವಂ ಜಿನ ।
ಧರ್ಮ್ಮವನಿಂಬಾಗಿ ತಿಳಿದು ನೆಗೞ್ದಿಂಗಕ್ಕುಂ ॥
ಸ್ವರ್ಮ್ಮೋಕ್ಷಸಿದ್ಧಿ ಬಗೆವಂ ।
ದುಃವರ್ಮ್ಮಂ ಪೆಱತಿಲ್ಲ ದೇಹಿಗೀಸಂಸೃತಿಯೊಳ್ ॥ 260

**ಉಕಾರಲೋಪಕ್ಕೆ ॥**

ವೃ ॥ ಗೆಲವಂ ಕೊಂಡಭಿಮಾನಿಯಾದನೊಳ್ಕೊಂಡನ್ಯಾವನೀಕಾಂತೆಯುಂ ।
ಸಲೆ ಶೌಚವ್ರತಿಯಾದನಿ[2]ರ್ತ್ತೆಱದೆರಟ್ಮಾತಾಡಿ ಬೞ್ದುಂ ಜಗ ॥
ದ್ವಲಯಕ್ಕೊನ್ನಡಿಕಾ[3]ಱನಾದನ[4]ನಯಕ್ಕುಳ್ಳೆಕ್ಕ ಸಂಗ್ರಾಮಗೊ ।
ಳ್ಕಲಿಯಾದಂ ವಿಪರೀತಜಾತಚರಿತಂ ಭೂಪಾಲರೊಳ್ಕಾಮದಂ ॥ 261

## ಸೂತ್ರಂ ॥ 58 ॥

ಅದಿದೆನ್ನದೆ ಮೂಱೆಂಬೀ ।
ಪದದಂತಂ ಲೋಪಮೆಯ್ದುಗುಂ ಕಪವರ್ಗ್ಗಂ ॥
ತುದಿಯೊಳ್ತ[5]ಗುಳ್ದು ಪುದಿದಿರೆ ।
ತದಾಗಮಂ ಹ್ರಸ್ವಪೂರ್ವ್ವಮಕ್ಕುಂ ಬಹುಳಂ ॥ 262

ಪ್ರಯೋಗಂ ॥

ವೃ ॥ ನೆಲಸಿರ್ದ್ದಪ್ಪುದಧಸ್ಥಳಂಬಿ[6]ಡಿದಧೋಲೋಕಂ ಸಮಂತೆಯ್ದೆ ಸು ।
ತ್ತಲುಮಿರ್ದ್ದಪ್ಪುದು ಮಧ್ಯಲೋಕಮೆಸೆದಿರ್ದ್ದಾಱಚೂಲಿಕಾಭಾಗದಾ ॥
ದಲೆಯೊಳ್ನಿಂ[7]ದಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂವಗುಂ ।
ದಲೆಯಾಗಿರ್ದ್ದುದು ದೇವದಂಪತಿರತಶ್ರೀಸುಂದರಂ ಮಂದರಂ ॥ 263

1 ಮೆಳ್ಗಂ. 2 ನಿತ್ಯಸ್ಥಿರದರಟ್ಮಾತಾಗೆ. 3 ಗಾಱ. 4 ನಯಶ. 5 ಳೆಪೊದಲ್ದು. 6 ಬಿಡ. 7 ಳ್ಕಂದುದದೂ.

ಪರಾರ್ಧಕ್ಕೆ ॥

ವೃ ॥ ಮುಕ್ಕೊಡೆ ಪುಷ್ಪವೃಷ್ಟಿ ಸುರದುಂದುಭಿ ಕೇಸರಿಪೀಠಮೊಂ[1]ದಿದಂ ।
ತಿಕ್ಕುವ ಚಾಮರಂ ಮಿಱುಪ ಪೂಗಳ ಗೊಂಚಲಶೋಕೆ ಭಾ[2]ನುವಂ ॥
ಮಿಕ್ಕು ತೊ[3]ಳಪ್ಪ ಭಾವಳಯುಮೊಪ್ಪುವ ಪನ್ನೆರಡುಂ ಗು[4]ಣಾಳಿ ಲೋ ।
ಕಕ್ಕೆ ವಿನೂತವೀರಜಿನಪಾಶ್ರಯುಮೆಂ[5]ಬಿವು ಸರ್ವ್ವಮಂಗಳಂ ॥ 264

ಕಂ ॥ ಅನವರತದಾನದಿಂ ಮಿ ।
ಕ್ಕನೂನಸೂನೃತದಿನ[6]ಸಮಶೌರ್ಯ್ಯೋನ್ನತಿಯಿಂ ॥
ವನನಿಧಿಪರೀತಸಕಲಾ ।
ವನಿಯೊಳ್ಮಿಕ್ಕುಪ್ಪರಿವೊಲಾದುದಾನೃಪನ ಗುಣಂ ॥ 265

ಬಹುಳಕ್ಕೆ ॥

ವೃ ॥ ತೀವಿರ್ದ್ದರ್ತ್ತುಮೊದಲ್ ಮೊಪಲ್ಗೆ ಪ[7]ಣೆಯುಂ ಮಾಗ[8]ಯ್ಯುಮಾಗಯ್ಯುನಿ ।
ತ್ತಾವಕ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಮಂ ॥
ತೀವಿರ್ದ್ದರ್ತ್ತು ತಳಿರ್ ಮೊದಲ್ ಪಣೆ ಕವಲ್ಕೊಂಬೆಂಬುಮೀಕೆಂದಳಿರ್ ।
ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕಿರ್ಗಂತೇಂ ಬೆಡಂಗಕ್ಕುಮೋ ॥ 266

## ಸೂತ್ರಂ ॥ 59 ॥

**ಉಪಹತಿ ನಾಲ್ಕುಯ್ದೆಂಬಿವ ।**
**ಉ[9]ಪಧೆಯೊಳಾಱುಂಬಿದರ್ಕ್ಕೆ ಮೊದಲೊಳ್ ಹ್ರಸ್ವಂ ॥**
**ಸ್ವಪರಸ್ವರಲೋಪಂ ಮ ।**
**ತ್ತೆರ್ಪುದೇೞಱೊಳಂತ್ಯಲೋಪಮೆಂಟರ್ಕ್ಕಕ್ಕುಂ ॥** 267

ಪ್ರಯೋಗಂ ॥

ಕಂ ॥ ಉರಗಂ ಕೊಂಡಲ್ಲಿಂ ನಾ ।
ಲ್ವೆರಲನಿತಂ ಕಳೆದು ಕಟ್ಟು ಮೇಗಂ ಬೇಗಂ ॥
ಸೆರೆವಿಡುಗೆ ಸುಡುಗೆ ಕಡಿದಿರ ।
ದರಿದಿಕ್ಕುಗೆ ನೀ[10]ವಿ ಕಳೆಗೆ ನಿರ್ವ್ವಿಷಮಕ್ಕುಂ ॥ 268

ಕೀಱಿ ಪುಗಲೆನೆಯುಮೆಂತುಂ ।
ಮೀಱಿದ[11]ನಂ ಪೊಕ್ಕು ಬಾಲೆಯಂ ಬಾಜ್ಗಮನಂ ॥
ದೇಱಿಸಿದಪನಹಿಕಯ್ಯೆಯು ।
ನೇಱಿದನಯ್ವಾಯ ಶಂಖಮಂ ಪೂರಿಸಿದಂ ॥ 269

ಆಱುದಿಂಗಳಾಯು[12]ವುಂಟೆನೆ ।
ಮಱುಗುವುದುಂ ನಲ್ಲರಲ್ಲಿ ತಮ್ಮಿಂ ಮುನ್ನಂ ॥
ಪಱಿವಟ್ಟು ಬರೆ ಕನಲ್ವುದು ।
ಮಱಿಪದೆ ನಾಲ್ವಗ್ಗೆ ನರಕದುಃಖದ ತೆಱನ ॥ 270

1 ಪೊಂದೆಶಂ । ದಿಕ್ಕು. 2 ಭಾಷಣಂ. 3 ಡೆಳಪ್ಪ, 4 ಗಣಾಳ. 5 ಪೆಂದಿವು. 6 ನೆನೆವ. 7 ಪಣೆಯಿಂ. 8 ಗಯ್ಯುಮಾಗಯ್ಯು. 9 ಉಪಧೆಯಿನಾ. 10 ಗಿವಿದುಗಳಗೆ. 11 ದಿನಂ. 12 ಪೊಂದೆನೆ.

ಕಂ॥ ಪರಿಮರ್ದ್ದಿಸು[1]ವುದು ಮುತ್ತೂ ।
ರರಸಮನಿಂಬಾಗಿ ಪಿಱಿದು ನೆಲದೊಳ್ ಲವಣಂ ।
ಬೆರಸೊರಸಿಕೊಂಡು ಪೂಸುಗೆ ।
ಕರಗುಗುಮೇೞ್ಪೊರೆಯೆನಿಪ್ಪ ಕುರುವುಂ ಕ್ಷಣದೊಳ್ ॥ 271

ಕಣ್ಗೆ ದಱಿದೊಡನೆ ನಾಲ್ವ ।
ತ್ತೆಣ್ಗುವುದವರೆಗಮಾಗಿದೊಡಂಬುಧಿ ಕಡಲ ॥
ತ್ತೆಣ್ಗೆ ಹರಿ ಬಂದುದಂ[2]ಕಡು ।
ಜಾಣ್ಗೆ ಡದಱಿದಾಗಳವಧಿಬೋಧೋದಯದಿಂ ॥ 272

## ಸೂತ್ರಂ ॥ 60 ॥

ಒಂಬತು ದಶಾಹತಿಯಿಂ[3]।
ತೊಂಬತ್ತೆನೆ ಸಲ್ಗುಮಗ್ರದೊಳ್ನೂಱರೆ ಮ ॥
ತ್ತೊಂಬಯ್ಯಾದೇಶಮನವ ।
ಲಂಬಿಸುಗುಮದಂತೆ ಮುಂತೆ ಸಾಸಿರಮಿರೆಯುಂ॥ 273

ಪ್ರಯೋಗಂ ॥

ಕಂ॥ ಸಾಸಿರಯೋಜನಮುಱ್ದ ಸು ।
ರಾಸುರಸಂಸೇವ್ಯಮಾಗಿ ತೊಂಬತ್ತೊಂಬ ॥
ಯ್ಸಾಸಿರಯೋಜನಮಂ ನೆಗೆ ।
ದೀಸುರಗಿರಿ ಪೆಂಪನೇಂ ಪುದುಂಗೊಳಿಸಿದುದೋ ॥ 274

## ಸೂತ್ರಂ ॥ 61 ॥

ಒಂದೆರಡೆಂಬಿವು ಪರದೊ ।
ಳ್ಸಂದಿಸೆ ಪತ್ತರ್ಕೆ ಪನ್ನೆನಿಕ್ಕುಂ ರೂಪಂ ॥
ಮುಂದೆ ಪೆಱವೊ[4]ಂದಿ ನಿಲೆ ಪದಿ ।
ಯೆಂದಕ್ಕುಂ ಸ್ವರದೊಳಮುರ್ದು ನಾಗಮುಮಕ್ಕುಂ ॥ 275

ಪ್ರಯೋಗಂ ॥

ಕಂ॥ ಎನಗಿದು ಚೋದ್ಯಂ ಪನ್ನೊಂ ।
ದನೆಯುದು ನೆಲೆ ತನ್ನ ನೆಗೞ್ದದಂತದು ಪದಿನಾ ॥
ಱನೆಯ ನೆಲೆಗುಯ್ದನೆಂಬುದ ।
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ ॥ 276

ವೃ॥ ಸಾರಲ್ಸಲ್ಲದು ಪನ್ನೆರಟ್ಟಿರಿಸಮಂ ನಾಡಂ[5]ತಡಂಗಿಪ್ಪುದು ।
ಗ್ರಾರಣ್ಯಂಗಳೊಳತ್ತಮೊಂದು ಬರಿಸಂ ಮೆಯ್ದೋಱಲಾಗರ್ಗಮಂ ॥
ದಾರಯ್ದಾತ್ತ[6]ಡಮಾಡಿದಂದು ಮಗುೞ್ದತ್ತೀರಾಱುವರ್ಷಂಬರಂ ।
ಸಾರಲ್ಸಲ್ಲದು ನಾಡನೆಂಬ ಸಮಕಟ್ಟಂತಾದೊಡೆಂತಕ್ಕುಮೋ ॥ 277

1 ಪಿರಿಯತ್ತುರಸ್ಸರಸಮನಿಂಬಾಗಿ. 2 ಕಂಪೊತ್ತ, 3 ಡೊಕ್. 4 ತೊಂದು. 5 ಪತ್ತು. 6 ಘರ್ಷ.

## ಸೂತ್ರಂ ॥ 62 ॥

ಸಾಸಿರಮಿರೆ ಮುಂದೊತ್ತಿ ಸ ।
ಮಾಸದೊಳಕ್ಕುಂ ಪಱಿನ್ನದರ್ಕ್ಕೆ ಯಥೋಕ್ತಂ ॥
ಶಾಸಿಸುವನ್ನರ್ಱಕ್ಕರ್ಂ ।
ಸಾಸಿರಕಂ ಪ್ರಾಂತಲೋಪಮುಂ ಕೆಲವೆಡೆಯೊಳ್ ॥ 278

ಪ್ರಯೋಗಂ ॥

ವೃ ॥ ಪಿಡಿಯೆಂ ಚಕ್ರಮನೆಂಬ ಚಕ್ರಿಯ[1]ನಿಱಾಚಕ್ರಂ ಭಯಂಗೊಳ್ವನಂ ।
ಪಿಡಿಯಿಪ್ಪೆಂ ವ[2]ರಚಕ್ರಮಂ ನರರಥಂ ತೂಳ್ದಾಕುರುಕ್ಷೇತ್ರದಿಂ ॥
ಪಡುವೆಣ್ಗಾವುದವ್ರೋಗೆ ಪೋ[3]ಗಲಿಸುವೆಂ ನಿಚ್ಚಂ ಧರಾಧೀಶರಂ ।
ಪಡಲಿಟ್ಟಂತಿರೆ ಮಾಱ್ಪನೋವದೆ ಪಯಿಂಜಾಸಿರ್ವರಂ ಯುದ್ಧದೊಳ್ ॥ 279

ಪರಾರ್ಧಕ್ಕೆ ॥

ವೃ ॥ ಒರ್ವರ್ಂ ಬಂದೊಂದೆತೇರೊಳ್ನರೆದ ಕುರುಬಲವ್ಯೂಹಮಂ [illegible]ಱಿ ಬೆಂ[4]ಕೊಂ ।
ದುರ್ವ್ವೀಶಂ[5] ನೋಡೆ ಮಾಱಾಂತೆನಗಮರಿಯನಾಗಿರ್ದ್ದನೀಮಿಱ್ತುಗೊಡ್ಡಂ ॥
ಸರ್ವ್ವಗ್ಗರ್ಂ ಸಲ್ಲವೆಂದೆಂದೊವಜನೊದಱಿ ನಿಂದೊರ್ವನುಂ ನೂಱನೂಱ್ಕೆ ।
ಸಿರ್ವದ್ರೋಣಾಕ್ಕಳಾದಂತಿ[6]ಸೆ ಮೊಗಸ ಸಲ್ಪಾಯುದ್ಧಮಂದತ್ತಮಿತ್ತಂ ॥ 280

ಕಂ ॥ ಸಾಸಿರ್ವರ್ವನಿತೆಯರ ।
ಯ್ಯಾಸಿರ್ವರ್ಪ್ರಿಯತನೂಜರಱಿಕೆಯ ಪದಿನೆ ॥
ಣ್ಬಾಸಿರ್ವರರಸುಗಳ್ವರ ।
ಸಾಸಾಸಿಗನುಚಿತದೀಕ್ಷೆಯಂ ಕೆಯ್ಕೊಂಡಂ ॥ 281

## ಸೂತ್ರಂ ॥ 63 ॥

ಬೆರಸಿ ಸಮಸಂಸ್ಕೃತಂಗ ।
ಳ್ಬರೆ ಕನ್ನಡದೊ[7]ಳಗೆ ಸಮತೆಯಿಂಪಂ ಸಲ್ಗುಂ ॥
ನಿರವದ್ಯಮಾಗಿ ಪದವಿಧಿ ।
ವಿರುದ್ಧಮಕ್ಕುಂ ತದನ್ಯಥಾವೃತ್ತಿಗಳೊಳ್ ॥ 282

ಪ್ರಯೋಗಂ ॥

ಕಂ ॥ ಅರಸುಗುಣಂ ಪಱಿಯನಣಂ ।
ಬರಲಿತ್ತುದೆ ಶಾಚದಳವು ಪರವೆಣ್ಗಿಸಂ ॥
ತರಲಿತ್ತುದೆ ಅಱಿಜನದೊ ।
ಳ್ಬ[8]ರಸಿರಲಿತ್ತುದೆ ಮಹಾನುಭಾವಂ ನೃಪನಾ ॥ 283

1 ಯು. 2 ಕರ. 3 ಪೋಗಬಿಸುವೆಂ. 4 ಪಱಿಬಿಂ । ತು. 5 ಕರ. 6 ತರ. 7 ದೊಳದನ 8 ಬೆರಸಲಿತ್ತುದ.

ವಿರುದ್ಧಕ್ಕೆ ॥

ವೃ ॥ ತರವೇೞ್ಮಾಣಿಕ್ಯಭಂಡಾರದ ಪುಡಿಕೆಗಳಂ ಪುಂಜಿಸಲ್ವೇೞ್ಸುವರ್ಣೋ ।
ತ್ಕರಮಂ ತೋಱಲ್ಕೆ ವೇೞ್ದಂತಿಗಳಸಿರಿಸವೇೞ್ಮಂದೆ ವಾಹಂಗಳಂ ಬಿ ॥
ತ್ತರಿಸಲ್ವೇೞ್ಚಿತ್ರಚೀನಾಂಬರಪರಿಕರಮಂ ಮಾಣದೆಂದೋಳಿಯಿಂ ಲೆ ।
ಕರನಾಗಳ್ವೇೞ್ಪನೀಯಲ್ಕೆ [1]ರೆದವರ್ಗೆ ಮಹಾದಾನಮಂ ವಿಕ್ರಮಾಂಕಂ ॥ 284

ಇಲ್ಲಿ ಕೆಲರ್ತ್ತರಗಾಸಿಶಬ್ದಂಗಳೊಳ್ ಸಮತೆಯು ನಿಚ್ಛೈಸುವರವರ್ಕ್ಕೆ ಲಕ್ಷ್ಯಂ ॥

ಕಂ ॥ ತುರಗದಱಿಂಗಳ್ಕವಿತರೆ ।
ತುರಂಗಮಾರೂಢನಾಗಿ ತನ್ನಯ ಹಯಮಂ ॥
ಪರಿಯಿಸಿ ಕೊಂಗುೞಿವಮ್ಮರ್ಗಂ ।
ಕರಾಸಿಯಿಂದಿಱಿದು ತವಿಸಿದಂ ಹಯಬಲಮಂ ॥ 285

ಕಂ ॥ ಕೂರಿಸಿ ವೀರಶ್ರೀಯಮಂ ।
ಕೂರದರಂ ಕೊಂದು ಸಮರಜಯಮಂ ಮಾಡ ॥
ಲ್ಕೂರಸಿಯೊಳ್ನಲಸುಗೆ ಕಂ ।
ಠೀರವವಾಹನೆ ಚಳುಕ್ಯಕಂಠೀರವನಾ ॥ 286

ಸೂತ್ರಂ ॥ 64 ॥

ಚಾಪಲವೀಪ್ಸಾಭೀಕ್ಷ್ಣ್ಯವ್ಯಸ ।
ನಾಪಾನುಕೃತಿಕ್ರಿಯಾಸಮಭಿಹಾರಾದಿ ॥
ಖ್ಯಾ[2]ಪನೆಯೊಳ್ ಪ[3]ದಕಕ್ಕಂ ।
ರೂಪದ್ವಿತ್ವಂ ಯಥಾಪ್ರಯೋಗಾನುಗತಂ ॥ 287

ಪ್ರಯೋಗಂ ॥
ಚಾಪಲಕ್ಕೆ ॥

ಕಂ ॥ ಅದಱಿಂದಮೊಪ್ಪಿಸೊಪ್ಪಿಸು ।
ಸುದತಿಯನಣ್ಮಣ್ಮು ನಾಚ್ಚಿಸಾಚ್ಚಲೆ ಎಲೆ ನೀ ॥
ನದಿರದೆ ನಿಲ್ನಿಲ್ನೀನೆ ।
ಚ್ಛಿದಿರ್ಚ್ಛಿದಿರ್ಚ್ಛನೆ ಜಟಾಯು ರಾವಣನೆಂಗುಂ ॥ 288

ವೀಪ್ಸೆಗೆ ॥

ವೃ ॥ ಮುದಮೂರೂರಬಲಾಜನಕ್ಕೆ ಪರಿನೀರೂರೂರ ತೋಂಟಕ್ಕೆ ಸಂ ।
ಪದಮೂರೂರ ಗೃಹಕ್ಕೆ ಪಂಕಜಗ ಚೆಲ್ವೂರೂರ ಗುಯ್ಯಲ್ಗೆ ಸಂ ॥
ಮುದಮೂರೂರ ಮ[4]ದಾಳಿಗಂಚೆಗಳ ಚೆಲ್ವೂರೂರ ಷಂಡಕ್ಕೆ ಪಾ ।
ಕೊದಮೂರೂರ ದನಕ್ಕೆ ತಕ್ಕರ್ಮುದಱಿಂ ರ[5]ಮ್ಯಂ ತದುರ್ವೀತಳಂ ॥ 289

ಆಭೀಕ್ಷ್ಣ್ಯಕ್ಕೆ ॥

ವೃ ॥ ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮಂ ।
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಗಳಾಟಮಂ ಮನಂ ।
ಗೊಳೆ ನಡೆ ನೋಡಿನೋಡಿ ಕುಣಿಯಲ್ಕೆಱೆ ಕಲ್ತು ಕಲಾಗುಣಂ ಪೊದ ।
ಳ್ದಳವಡೆ ಬಾಲಭಾವದೊಳೆ ಬಾಲಕಿಯುರ್ಬ್ಬಳೆವನ್ನಿ[6]ರಂತರಂ ॥ 290

1 ಳ್ವರವರ್ಗೆ. 2 ವ್ಯಪನೆ. 3 ಪದದಕ್ಕಂ. 4 ಬುಧಾಳಿ. 5 ರಮ್ಯಂ. 6 ನಿರಾಕುಳಂ.

ಸಮೀಪಕ್ಕೆ ॥

ಕಂ॥ ಅಱಿವು ಕೊಲೆ ಕಳವು ಪುಸಿಯುವ ।
ಗಱಿಯಾಂ ಪೞಿಯೆಂಬ ದೋಷದೊಳ್ಪೊರೆದ ನರಂ ॥
ಕೆಱಕೆಱಗೆ ನರಕಬಿಲದೊ ।
ಳ್ಗಱಿಗಱಿಸಿಱಿಗುಂ ರಸಾಂತವಮಂ ತಾ[1]ಪಿನೆಗಂ ॥ 291

ಅನುಕೃತಿಗೆ ॥

ಕಂ॥ ವಿನುತಕ್ರೌಂಚಾಚಳರಂ ।
ಧ್ವನಿಕಟದಿಂ ಮೊಗಸಿ ಬರ್ಪ್ಪ ಹಂಸಾಳಿಯನಂ ॥
ದನುಕರಿಸಿ ಪರಿದು ಭೋರ್ಭೋರ್ ।
ರೆನೆ ಪಾಯ್ದುದು ಹಿ[2]ಮನಗಕ್ಕೆ ಗಂಗಾಸ್ರೋತಂ ॥ 292

ತ್ರಿಪ್ರಯೋಗಮುಮಿಲ್ಲಿ ಸಾ[3]ಧುವಕ್ಕುಂ ॥

ಕಂ॥ ಬೆಳಗೆಯ್ಗಳೊಳಿರ್ದ್ದತ್ತುಂ ।
ಕಳರವದಿಂ ಕೆಯ್ಯನೆತ್ತಿ ಹ[4]ಯಲಲ್ಲೆನುತುಂ ॥
ಬಳೆಗಳ್ಘುಳ್ಘುಳ್ಘು[5]ಲ್ಲೆನೆ ।
ಗಿಳಿಸೋವಾಕೆಗಳಿನೊಪ್ಪುಗುಂ ಕೆಲವೆಡೆಯ್ಗೊಳ್ ॥ 293

ಕ್ರಿಯಾಸಮಭಿಹಾರಕ್ಕೆ ॥

ಕಂ॥ ಅಡವಿ ಬಯಲಾಗೆ ನ[6]ದಮೊ ।
ಱ್ಕುಡುಗೆ ತೆಮರ್ಸಂಸವಾಗೆ ಬಟ್ಟೆಯೊಳೆಲ್ಲಂ ॥
ನಡೆ ನಡೆಯೆಂದೇಂ ನಡೆದುದೊ ।
ಪಡೆ ಪಡೆವಚ್ಚರಿಯನಾಸುರಾಪಗೆವರೆಗಂ ॥ 294

ಆದಿಗ್ರಹಣಕ್ಕೆ ॥

ಕಂ॥ ಅಂ[7]ತೆಂತೆನೆ ಪರಿಚಾರಕಿ ।
ಗಿಂತೆಂದಂ ಬ್ರಹ್ಮಚಾರಿ ಕೆಳೆಕೆಳೆ ಸಿತಗಂ ॥
ಗಿಂತು ಕಿಡಿಸುವುದೆ ತಪಮನ ।
ದೆಂತುಂ ಗಿರಿಸು[8]ತೆಯು ಬಯಸಲಾತಂ ದೊರೆಯೇ ॥ 295

## ಸೂತ್ರಂ ॥ 65 ॥

ಪಲ್ಲಟಿಸಿ ಡಕಾರದ ನೆಲೆ ॥
ಯಲ್ಲಿ ಱಕಾರಂ ಱಕಾರದೊಳ್ ರೇಫಂ ತಾ ॥
ನೆಲ್ಲಿಯುಮನುಕ್ತಂ ಪದವಿಧಿ ।
ಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ ॥ 296

1 ತಾಗುವಿನಂ. 2 ಹೇಮನಗಕೆ. 3 ಸಾಧ್ಯಗಳ. 4 ಹಲಲಬೆನು. 5 ಘಲ್ಲನೆ. 6 ನಷ್ಟ । ಟ್ಪುಡಿಯ್ಯ.
7 ಅಂತೆಗಿಡುವೆ. 8 ಸುತೆಯು.

ಅದೆಂತೆನ್ದೊಡೆ ॥

ಕಂ ॥ ಕಾಡುಂ ಕೋಡುಂ ನಾಡುಂ ।
ನೀಡುಂ ನಾಮಂಗಳೊಳ್ ಕ್ರಿಯಾರ್ತ್ಥಂಗಳೊಳಂ ॥
ಮಾಡುವುದುಂ ನೋಡುವುದುಂ ।
ಬೇಡುವುದುಂ ಱತ್ವವಿಧಿಗೆ ಪರಿಗಣಿತಂಗಳ್ ॥ 297

ಅನಿತರ್ಕ್ಕಂ ಯಥಾಕ್ರಮದಿಂ ಪ್ರಯೋಗಂ ॥

ಕಂ ॥ ಕಾೞ್ಕಿಚ್ಚು ತಗುಳೆ ತವೆಮ್ಮೊಳ್ ।
ಕೋೞ್ಕೊಟ್ಟ ವನದ್ವಿಪೇಂದ್ರಚಯಮತಿಭಯದಿಂ ॥
ನೀ[1]ೞ್ಕಿರಿಸಿ ನಿಲ್ಲದೆನಸುಂ ।
ನಾ[2]ೞ್ಕಿಡಿವೋಪಂತೆ ಪೋಪುದೀನಗತಟದಿಂ ॥ 298

ವೃ ॥ ಕಾೞ್ಪರವಾಗೆ ಕಾವ್ಯರಸಮರ್ತ್ಥಮುಮಕ್ಕರಮುಂ ಪ್ರತೀತಿಯುಂ[3] ।
ಮಾೞ್ಪನೆಗಂ ಜಲಕ್ಕನಿರೆ ಪೇ[4]ೞದೆ ಕೆಮ್ಮನೆ[5]ೞಂಟುವೇೞ್ದ ಚಿಃ ॥
ನೋೞ್ಪದೆ ಮುಯ್ಯನಾಕೃತಿಗೆ ಪಂ[6]ಜಿಕೆ ವೇೞ್ಪದದರ್ಕ್ಕೆ ಟಿಪ್ಪಣಂ ।
ಬೇೞ್ಪುದು ಟೀಕು ವೇೞ್ಪದನೆ ಪೇೞ್ದವನುಂ[7] ಕವಿಯೆಂಬ ಲೆಕ್ಕಮೋ ॥ 299

ಅಲ್ಲಿ ರೇಫಕ್ಕೆ ॥

ಕಂ ॥ ಮಾರ್ಪ್ಪಡಿಯೆ ಮಾಣನೀಭಟ ।
ನೇರ್ಪ್ಪಸವಿ[8]ಗನೀತನಿದಿರ್ಗೆ ಬರಲಾರ್ಪ್ಪವರಾರ್ ॥
ಮಾರ್ಪ್ಪಡೆಯೊಳ್[9]ನ್ನ ಘನದೋ ।
ರ್ದ್ದರ್ಪ್ಪಮನಾವರಿಸಿ ನೆಗೞ್ದ ಕ[10]ಲಿ ರಣವಜ್ರಂ ॥ 300

ಬಹುಳಗ್ರಹಣಕ್ಕೆ ॥

ವೃ ॥ ಪೇೞಿದ್ದರ್ಪ್ಪತ್ತು ತೋಳುಂ ದಶಮುಖಮು[11]ಖರಾಟೋಪಮುಂ ಮಿಱುತ್ತ ರೂಪಂ ।
ತೋಱುದ್ದರ್ಗಂತಿ[12]ದ್ದರ್ ರೂಪುಂ ಹರನಿದಿರೊಳಗುರ್ವ್ವಪ್ಪಿನಂ ಪೊಣ್ಮಿದಣ್ಮಂ ॥
ಬೀೞುತ್ತುಂ ದೇವನಂ ಪೂ[13]ಜಿಸಲಮಯಮದಿಂದೊಂದೆರಡುಮ್ಮಾಱುನಾಲ್ಕು ।
ಯ್ದಾಱೇೞೆಂಟೊಂಬತೆಂದಿಂತರಿಗುಮ ತಲೆಯೊಂ[14]ಬತ್ತುಮಂ ದೈತ್ಯರಾಜಂ ॥ 301

## ಸೂತ್ರಂ ॥ 66 ॥

ಕೆಲಬರುಪಾಂತ್ಯದಕಾರದ ।
ನೆಲೆಯೊಳೊಕಾರಂ ಮಯುದ್ವಯಕ್ಕೈದ್ಯತ್ವಂ ॥
ಸಲೆ ಕೂಡೆ ಣಕಾರಂ ಕೇ ।
ವಲಂ ನಕಾರಕ್ಕೆ ಣತ್ವಮಕ್ಕುಮದೆಂಬರ್ ॥ 302

ಪ್ರಯೋಗಂ ॥

ಕಂ ॥ ಅವ್ರೊಂ ಕಾವ್ರೊಂ ಲೋಕಮ ।
ನಾವ್ರೋನಿನಮರಕ್ಕಳಮರರೆನಿಸಿದರೊಲವಿಂ ॥
ದಾವ್ರೊನುರಸ್ಥಳದೊಳ್ ಲ ।
ಕ್ಷ್ಮೀವಧು ನೆಲಸಿರ್ಪ್ಪಳಾಮುರದ್ವಿಷನೀತಂ ॥ 303

1 [illegible]. 2 [illegible]. 3 [illegible]. 4 [illegible]. 5 [illegible]. 6 ಪಂಚಿಕೆ. 7 ನಾಂಕವಿಯೆನ್ನ ಬಕ್ಕಮೋ. 8 ವಿಗ. 9 ಳನ್ನಪದದೋ. 10 ಕವಿ. 11 ಕುಶ. 12 ಶಪ್ಪ. 13 ಪುಷ್ಟಸ. 14 ಯುಂಪತ್ತು.

ವಕಾರದೌತ್ವಕ್ಕೆ ||

ವೃ || ಕಸವರದಾಸೆಯಿಂ[1] ಪದಪುದೋರ್ವ್ವರ್ಜಿವೆಂಡಿರ ನಲ್ಮೆಯೆಂದು ಭಾ |
ವಿಸದಿರು ನೀಂ ಮನೋಜನಮನವಲ್ಲಭ ಕೂಱಿಸಿ ಕೂರ್ತ್ತರ್ ನಿನ್ನ ಮೆಯ್ ||
ಕಸವರಮೆನ್ನನಿನ್ನುನಿಸದೌ[2]ದಲೆಗಾಣ್ಬಿನಮೆಂದೆ ನಂಬು ಚಿಃ |
ಕಸವರಪೇಟಮೆಂಬುದೆಂಕೊಳ್ವರ ಪೇಟಮದೆನ್ನ ಪೇಟಮೋ || 304

ಯಕಾರದೈತ್ವಕ್ಕೆ ||

ವೃ || ಅಸಿತೇಂದೀವರಲೋಲಲೋಚನೆಯುನಂದಂತಃಸಭಾಮಧ್ಯದೊಳ್ |
ಪಸುವಂ ಪೋದುವವೋಲ್ ವೋದೆಯುಮದಂ ಕಂಡಂತೆ ಪಲ್ಗಚ್ಚಿರ್ ಸೈ ||
ರಿಸಿದೆಂ ನಿನ್ನಯ ನನ್ನಿಗಿನ್ನೆವರೆಗಂ ದುಃಶ್ಶಾಸನೋರಸ್ಥಲೋ |
ಚ್ಛ್ವಸಿತಾಸೃಗ್ಜಲಪಾನಮಂ ಬಯಸಿ ಬಾಯ್ ತೇರ್ಸೈಪ ಸೈತಿರ್ಪ್ಪನೇ || 305

ನಕಾರಣ[3]ತ್ವಕ್ಕೆ ||

ಕಂ || ಕಣ್ಣಾರೆ ನೋಡಿ ಮೂವಿನ |
ತಣ್ಣೆಳಲೊಳ್ ನಲಿವ ಸಿದ್ಧಚಾರಣಗಣಮಂ ||
ಪಣ್ಣನೆ ಬಂದೆಳಗಾಯರ |
ಪಣ್ಣನೆ ಪಱಿಪಱಿದು ತಿಂಬ ಬಲಿಮುಖಕುಲಮಂ || 306

ಸೂತ್ರಂ || 67 ||

ಪೋಯ್ ಬಯ್ ಮತ್ತಾರಯ್ ಗೆಯ್ |
ಸಯ್ಯೆಂದು ವಿಕಲ್ಪದಿಂ ಯುಸಂಯೋಗದೊಳಾ ||
ಶ್ರಯಿಸಿಕ್ಕುರ್ಂ ಗುರುಲಘುಗ[4]ತಿ |
ನಿ[5]ಯಮಮದೇದೋರ್ದ್ವಯಕ್ಕಮಕ್ಕುಂ ಪ್ರಾಯಂ || 307

ಪ್ರಯೋಗಂ ||

ಕಂ || ನಡೆ ಕೋಲ್ವರಮೆಂದಂಬುರ |
ದೆಡೆಯುಂ ಪು[6]ಣ್ಗೆತ್ತುರ್ ಕಾಳವಟ್ಟದ ಕೊ[7]ಪ್ಪಂ ||
ಪಿಡಿದು ನೆಱಲ್ದಕ್ಕರ್ಸುತಂ |
ಗಿಡಿಗಂ ಪೋಯೆ ನೊಂದ ಭುಜಗನಿರ್ಪ್ಪಂತಿರ್ದ್ದಂ || 308

ಮೆಯ್ಯ ಮಸಿ ಕೊರಲ ಬ[8]ಕ್ಕಳೆ |
ಪೊಯ್ಯೆ ಪು[9]ಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ||
ರಯ್ಯಮೆನೆ ಪಾಡುತಿರ್ದ್ದಳ್ |
ನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ || 309

ವೃ || ಪಿಡಿದು ಮೆ[10]ಚ್ಚದೆ ನೋವದೆ ಪೆಂಡಿರಂ |
ಜ[11]ಡಿಯೆಯುಂ ಬಯೆಯುಂ ಬಲಗರ್ವ್ವದಿಂ ||
ಮಿಡುಕಲಣ್ಮದೆ ನೋಡಿದ ಸಾಸಿಗಂ |
ನುಡಿಯದಿಕ್ಕುವೆ ಬೀರಮನಾರೊಳಂ || 310

1 ಪೊಲ್ಪುದು. 2 ರಾಶದೆಣ್ಬಿನ. 3 ನಕಾರದ್ವ. 4 ಗತಿ. 5 ನಿಯಮಮದ. 6 ಪುಣ್ಗೆತ್ತುರ್. 7 ಕೊಪ್ಪಂ. 8 ಬಕ್ಕಂ. 9 ಕನಲ್ಗರೆವ, ಕೆಂಬ್ಗರೆವ. 10 ಮೆಚ್ಚದ. 11 ಜಡಿಯಲುಂ ಬಯಲುಂ.

ಕಂ ॥ ಸುಯ್ಯು ನಿಡುಸು[1]ಡುಗದಿರೆಯುಂ ।
ಮೆ[2]ಯ್ಯರೆ ಮಱ್ಗಿದೆಯುಮಿಂತು ಸಂದಂದಿನಿಬರ ॥
ಬಯ್ಯಲೆ ಪೊಯ್ಯಲೆ ಕು[3]ರುಳಂ ।
ಕೊಯ್ಯಲೆ ಪೋಯ್ತಿಂತು ವಿನಯವತಿಗಂ ಪತಿಗಂ ॥ 311

ಆರಯೆ ಜಡನಾದೊಡಮಧಿ ।
ಕಾರಿಯ ಮಾಡಿದುದೆ ಪವಣದಂತಿಂತೆನವೇ ॥
ಡೂರರೂರೊಳಱುಗನಾದೊಡ ।
ಮೂ[4]ರಡಿ ಪವಣೆಂಬುದಲ್ತೆ ನಾಣ್ಣುಡಿ ಜಗದೊಳ್ ॥ 312

ಆರಯ್ಯೆ ಸರ್ವ್ವಭೂತಾ ।
ಧಾರಂ ಮಱೆಯುಂ ನೃಪೇಂದ್ರನುಂ ಮಱೆಗಾಲಂ ॥
ಬಾರದೊಡಂ ನಿರ್ವ್ವಹಿಸುವ ।
ರಾರುಂ ನೃಪನಿಲ್ಲದಂದು ನಿರ್ವ್ವಹಿಸುವರೇ ॥ 313

ವೃ ॥ ಏಳಿದಂಗೆಯುಲಿಮಾಗಡೆ ನಮ್ಮ ।
ಳ್ಳಾಳನೊಳಗ್ಗದಱೆಯುಂ ರಥಕ್[5]ಟ್ಯಾ ॥
ವ್ಯಾಳದಂತಿಕುಲಮುಂ ಸಮಕಟ್ಟಿಂ ।
ಕಾಳೆಗಕ್ಕೆ ತಡೆದಪುರ್ವ್ವದಯುಕ್ತಂ ॥ 314

ಕಂ ॥ ನಿಮ್ಮಂ ಪಿಂಬಡಿನೊಳದೇ ।
ಸಮ್ಮದಮೆಮಗಂ ಧರಿತ್ರಿಗಂ ರಾಜ್ಯದ ಮೋ ॥
ಹಮ್ಮಱೆದುಮೊಂದದೆಮ್ಮೊಳ್ ।
ಕೆಮ್ಮನೆ ನೀಮಿನಿತುಮಾಗ್ರಹಂಗೆಯ್ಯದಿರಿಂ ॥ 315

ಆಯತಿ ನಿಮಿರ್ವಂತು ಗುಣಾ ।
ಮ್ನಾಯಮನೊಳಕೊಂಡು ಬ[6]ಱಿದ್ದಡದು ಬಾಱೆನಿಕುಂ ॥
ನ್ಯಾಯಮನೊಕ್ಕಳೆ ಪಱಿವಿನ ।
ಮಾಯುಂ ಸಯೆ ಬಱಿದ್ದೊಂದು ಬಾಱಿಂ ಬಾಱೇ ॥ 316

ಕಾಯದೆ ಚಲಮುಂ ಪಲರುಂ ।
ಚೀಯೆನೆ ಪತಿ ಸಾಯೆ ಸ[7]ಯ್ಯಲಂಜಿದ ನಾಯುಂ ॥
ನಾಯೆಂಬೆಸಾ[8]ಳ್ದನಂ ಕಾ ।
ದಾಯತಿ ನಿಲೆ ಸತ್ತ ನಾಯುನಾಂ ನಾಯೆಂಬೆಂ ॥ 317

ಏಕಾರಕ್ಕೆ ॥

ವೃ ॥ ಕುಡಿದಂಭೋಧಿಗಳೇೞುಮಂ ತವಿಪುದೇ ಗೋತ್ರಾದ್ರಿಸಂಘಾತಮುಂ ।
ಪಿಡಿದೇಂ ಕೀೞ್ವುದೆ ದಿಗ್ಗಜೇಂದ್ರಚಯಮಂ ಮಾ[9]ರ್ಪ್ಪೊಯ್ವುದೇ ಕಟ್ಟ ನಿ ॥
ಮ್ಮಡಿಗೊಪ್ಪಿಪ್ಪುದೆ ಲೋಕಪಾಲಕರನಾಬ್ರಹ್ಮಾಂಡಮಂ ಚಂಚುವಿಂ ।
ದೊಡೆದೀಡಾಡುವುದೇ ವಿಹಂಗಮಮಿದೆಂದೇಕಬ್ಬು ನೀಮೇಳಿಪಿರ ॥ 318

1 ಕಡುಗ. 2 ಮೆಯ್ಯುಡಗದನಾಗಿ ಮಱ್ಗಿ. 3 ತಲೆಯುಂ. 4 ಮಾಪ್ಪು. 5 ಪತ್ತಿ. 6 ಬಾಲ್ಪದದು. 7 ಸಾಯು.
8 ನಾಳ್ಪನಂ ಕೊಂಡಾ. 9 ಮಾಪ್ಪಿರ್.

ಒಕಾರಕ್ಕೆ ॥

ವೃ ॥ ತಂದೆಯ ನನ್ನಿಗಿತ್ತನನುಜಂಗೆಳೆಯಂ ರಘುವಂಶನೆಂದು ಜೇ ।
ಯೆಂದಪುದೀಜಗಜ್ಜನಮಿದಂ ಸಿ[1]ರಿಗೆಂಬುದೊ ಲೋಭಮೆಂಬುದೋ ॥
ಪಂದೆತನಕ್ಕೆ ವೊತ್ತವೊದಲೆಂಬುದೊ ಮತ್ತಿನ[2]ನೆಂಬೊಡೂನನೆಂ ।
ಗುಂ ದೊರೆವೆತ್ತನೆಂಗುವೊ ಕುಲೋದ್ಗತನೆಂಗುವೊ ತಕ್ಕನೆಂಗುವೋ ॥ 319

ಪ್ರಾಯೋಗ್ರಹಣಕ್ಕೆ ॥

ಕಂ ॥ ಎಲೆವಳ್ಳಿಯ ತಳ್ಪಂದೇ ।
ಬಿಲೆವಾಱೆಯ ಪರಪಿನಿಂದಶೋಕೆಯ ಪೊದಱಿಂ ॥
ಮಾಲೆವಾಯ್ದ ಲತೆಯ ಪುದುವಿಂ ।
ತೊಲಗದು ಬನದೊಳಗೆ ಬ[3]ಳೆದ ಕತ್ತಲೆ ಪಗಲುಂ ॥ 320

ಒಲೆಯನೋಲೆಯೊಳಿಕ್ಕಿದ ।
ನಾಲೀಢವನಿಟ್ಟು ಬೇಱೆ ನು[4]ಡಿದಟ್ಟುದನೇಂ ॥
ಚೋಳನೆ ಕೇರಳಧಾತ್ರೀ ।
ಪಾಲಂ ನುಡಿದಂತೆ ನಾಳೆ ನಿಲ್ಲಾಹವದೊಳ್ ॥ 321

ಇದು ಶಬ್ದಸ್ಮೃತಿಯೊಳ್ ಸಮಾಸಪ್ರಕರಣಂ ॥

---

## ತದ್ಧಿತಪ್ರಕರಣಂ.

### ಸೂತ್ರಂ ॥ 68 ॥

ಇವು ಪಣ್ಯಮಿವರ್ಗೆ ಮೇಣಿಂ ।
ತಿವು ಶಿಲ್ಪಂ ಮೇಣ್ ನಿಯೋಗಮಿವನಸಾವಂ ಮೇ ॥
ಣಿವನಾಚರಿಸುವನೆಂದಿಂ ।
ತಿವಜಿಳೊಳಗಪ್ರತ್ಯಯಂ ಯಥೋಕ್ತಿಯಿನಕ್ಕುಂ ॥ 322

ಪ್ರಯೋಗಂ ॥

ಕಂ ॥ ಗಂದಿಗನೆರವಣಿಗಂ ಸರ ।
ವಂದಿಗನಾಪಟ್ಟಸಾಲಿಗಂ ಬಾಣಸಿಗಂ ॥
ಮಾಂ[5]ದರಿಗಂ ಜೋಯಿಸಿಗಂ ।
ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ ॥ 323

1 ಶಿರ. 2 ನೆಂಬುದೂನ. 3 ಪೊಳೆವ. 4 ನಡು. 5 ಮುದುರಿಗಂ.

## ಸೂತ್ರಂ ॥ 69 ॥

ಇದಱೊಳವಂ ವ್ಯಾಪೃತನೆನೆ ।
ತದಗ್ರದೊಳ್ ಕಾಱಶಬ್ದಮುಕ್ಕಂ ಕೆಯ್ಕೊಂ ॥
ಇದನೀತಂ ನಡೆಯಿಪನೆನೆ ।
ತೊದಳೇಂ ವಳಮೆಂದು ವಳ್ಳಮೆಂದಿವು ಸಂಗಟ್ಟುಂ ॥ 324

ಪ್ರಯೋಗಂ ॥

ಕಂ॥ ನಗೆವಡಿಕಾಱಂ ನೀಱಂ ।
ಬಗೆಕಾಱಂ ಪಾಟಕಾಱನೊ[1]ಳ್ನುಡಿಕಾಱಂ ॥
ಪಗೆಕಾಱನಾಗಿಯುಂ ಕೆ ।
ಯ್ಮಿಗೆ ತಕ್ಕಂ ಕೆಯ್ದುಕಾಱನೆನಿಸಲ್ಕಾಱಂ ॥ 325
ಅಡಪವಳಂ ಪಡೆವಳ್ಳಂ ।
ಮಡಿವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ॥
[2]ಅಡುವಳನೆಂದಿಂತಿವರಂ ।
ಕಡಂಗಿ ಬಿಸೆ ಜಡಿಯದಿರ್ಕ್ಕೆ ನಱುಮಱಿವರಸಂ ॥ 326

## ಸೂತ್ರಂ ॥ 70 ॥

ಇದನೀತಂ ಮಾಳ್ಪನೆನಿ ।
ಪ್ಪುದಱೊಳ್ ಗಾಱಪ್ರಯೋಗಮಕ್ಕುಮಪಭ್ರಂ ॥
ಶದೊಳಮದೆ ವರ್ತ್ತಿಕುಂ ಮ ।
ತ್ತದರ್ಕ್ಕೆ ಕವರ್ಮ್ಮಾದಿಯಾದೊಡಾದಿಗೆ ಲೋಪಂ ॥ 327

ಪ್ರಯೋಗಂ ॥

ಕಂ॥ ಅಣಿಯರಮೆಸೆದೊಪ್ಪಿರ್ಪ್ಪವು ।
ಮಣಿಗಾಱರ ಕಂಚಗಾಱರೊಱೆಗಾಱರ ತಿಂ ॥
ತಿಣಿಯೆನಿಪ ಮಾಲೆಗಾಱರ ।
ಗಣನಾತೀತಂಗಳಾಪಣಂಗಳೆ ಪೊಱಲೊಳ್ ॥ 328

ಆದಿವರ್ಣ್ಣಲೋಪಕ್ಕೆ ॥

ಕಂ॥ ಅಱಿದು ನರನೊ[3]ವಜರನ್ನಂ ।
*ಕುಱುಗೋರದ . ಱ . ನದಱುನೊಡ್ಡಿಸಿದಂ ಕ ॥
ಮ್ಮಱನಂಬು ಕಮ್ಮಱಂಗೆಂ ।
ದಱಿಯದೆ ನುಡಿವಂತು ನಾಡವರ್ ಗಾವಿಲರೇ ॥ 329

1 ನೊಳ್ನಗೆ, 2 ಅಡಬಳ, ಅತಬಳ. 3 ನೋಡಜನ್ನಂ. * ಕುಱುಗೋಲ್ಪಱಱಱನದಱುನೊಡ್ಡಿಸಿದಂ—ಎಂದಿರಬಹುದೋ ಏನೋ ತಿಳಿಯದು. ಪದ್ಯದ ಅರ್ಥವು ಸ್ಪಷ್ಟವಾಗಿಲ್ಲ.

## ಸೂತ್ರಂ || 71 ||

ಈಪೇೞ್ದನಿತುಂ ಶಬ್ದಕ |
ಳಾಪಂ ಸ್ತ್ರೀವಿಷಯಮಾ[1]ದೊಡಿತಿಪರಮಕ್ಕುಂ ||
ರೂಪಾನ್ಯತ್ವದೊಳಾದಿಗೆ |
ಲೋಪಂ ತತ್ಪ್ರತ್ಯಯಕ್ಕೆ ಸಂಭವಿಸಿರ್ಕ್ಕುಂ || 330

ಪ್ರಯೋಗಂ ||

ಕಂ || ಮಡಿಯುಂ ಮಡಿವಳ್ತಿಯವೋಲ್ |
ಬಿಡದಮೃತಾನ್ನಮನೊಜಲ್ದು ಬಾಣಸಿಗಿತಿವೋಲ್ ||
ಕುಡುತಿ[2]ರ್ದರ್ಗಳ್ ಪೂಮಾಲೆಯ |
ನೆಡೆಯುಡುಗದೆ ಮಾಲೆಗಾರ್ತಿವೋಲ್ ಮತ್ತೊರ್ವರ್ಗಳ್ || 331

## ಸೂತ್ರಂ || 72 ||

ಇಂತಿದು ವಿಭಾಷೆಯಿಂ ವ |
ರ್ಣಾಂತರದೊಳಮಕ್ಕುಮುೞಿವ ಗುಣವಚನಮುಕಾ ||
ರಾಂತಮ[3]ಳಂತಂ ಸ್ತ್ರೈಣದೊ |
ಳಂತವಱಿಂ ಪೆಱವು ಪುಂಸ್ತ್ವದೊಳ್ ಸಂ[4]ಮರೂಪಂ || 332

ಪ್ರಯೋಗಂ ||

ಕಂ || ಬಕ್ಕಲಿತಿ ಜೋಡೆಮಾದಂ |
ತಕ್ಕುಮ[5]ವಳ್ ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋ ||
ಟಕ್ಕೆ ಕಡುಸೊಂದಿ ಸಾಣೆಲಿ |
ಬಕ್ಕಂಬಯಲೊಳಮದಾರುಮಂ ಬಂ[6]ಚಿಸುವಳ್ || 333

## ಸೂತ್ರಂ || 73 ||

ಅಲ್ಲಿಯೆ ಪುಟ್ಟಿದನಿಂತಿವ |
ನಲ್ಲಿಯೆ ತಾಂ ಬಳೆದನೆಂದು ಪೇೞ್ವರ್ತ್ಥದೊಳಂ ||
ತೆಲ್ಲಮಿಚಪ್ರತ್ಯಯಮಿಂ |
ತಲ್ಲಿ ಯಥಾಲಕ್ಷ್ಯಮಾದಿಗಕ್ಕುಂ ಹ್ರಸ್ವಂ || 334

ಪ್ರಯೋಗಂ ||

ಕಂ || ಪೊೞಲಿಂದ್ರಪುರಂ ಕಾಲೂರ್ |
ಪೊೞಲಿಂದ್ರರ್ ಪೊೞಲ ಮಾನಸರ್ ಕಾಲುರಿಚರ್ ||
ಪೊೞಲಿಚರೆನೆ ಸೊಗಯಿಸುವುದು |
ಪೊೞಲಿಂ ಕಾಲೂರ್ಗ್ಗಳಿಂದಮಂತಾವಿಷಯಂ || 335

---

1 ಮಾತೊಂತುಂಪರ. 2 ತಿಪ್ಪರ್ಗಳ್. 3 ಮದಂಕಂ. 4 ಸ್ತ್ರೀರೂಪಂ. 5 ದವಳ್. 6 ಛಲಿ.

## ಸೂತ್ರಂ ॥ 74 ॥

ಅಲ್ಲಿ ಇದುಂಟೆಂಬತ್ಥರ್ದೊ ।
ಳೆಲ್ಲಿಯುಮುಕ್ಕೊಡೆಯನಂತಶಬ್ದಮು[1]ವಕ್ಕುಂ ॥
ಎಲ್ಲಂವದೊಳಂ ಪೋಲಿಸು ।
ವಲ್ಲಿ ಗುಣಾಧಿಕ[2]ರೊಳಂತೆ ವೋ[3]ಲ್ ತಾನಕ್ಕುಂ ॥ 336

ಪ್ರಯೋಗಂ ॥

ಕಂ॥ ಸಿರಿಯೊಡೆಯುಂ ಸಿರಿಯುಳ್ಳಂ।
ಸ[4]ರೂಪಿ ಗುಣವಂತನಧಿಕದಾನಿ ಮ[5]ಹೇಚ್ಛಂ ॥
ನರರೊಳಿವನೆನಿಸಿ ಬಾಳ್ವುದು ।
ಪುರಾತನೋದಾತ್ತಪುಣ್ಯಪರಿಪಾಕಫಲಂ ॥ 337

ಪರಾರ್ದ್ಧಕ್ಕೆ ॥

ವೃ ॥ ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ ।
ಶ್ವರಭವನಾಗ್ರದಂತೆ ದೃಢವೇತ್ರಲತಾಶತದುಪ್ಪ್ರವೇಶಮುಂ ॥
ಬರತಳದಂತೆ ಋಕ್ಷಮೃಗಲುಬ್ಧಕಸಂಗತಮಂಬುರಾಶಿಯಂ ।
ತಿರೆ ತತವಿದ್ರುಮದ್ಯುತಿ ನಿರಂತರಮೊಪ್ಪುಗುಮಾವನಾಂತರಂ ॥ 338

ಕಂ ॥ ಕರಿವೋಲ್ ಭದ್ರಗುಣಂ ಕೇ।
ಸರಿವೋಲ್ ನಿರ್ವ್ಯಾಜಶೌರ್ಯನಂಭೋನಿಧಿವೋಲ್ ॥
ಶರಣಾಗತರಕ್ಷಣಪಟು ।
ಗಿರಿವೋಲ್ ನಿಷ್ಕಂಪಚಿತ್ತನಾನೃಪತುಂ[6]ಗಂ ॥ 339

## ಸೂತ್ರಂ ॥ 75 ॥

ಅವಱೊಳ್ ವೋಲಕ್ಕುಂ ಹ್ರ ।
ಸ್ವವಿಧಾನಂ ಪಾಕ್ಷಿಕಂ ಮಕಾರಾಗಮದಿಂ ॥
ವ್ಯವಧಾನಮವರ್ಣ್ಣಕ್ಕ ।
ಕ್ಕವಲ್ಲಿ ಬಶ್ರುತಿ ವಕಾರದೊಳ್ ನೆಲೆಗೊಳ್ಗುಂ ॥ 340

ಪ್ರಯೋಗಂ ॥

ಪೂರ್ವಾರ್ದ್ಧಕ್ಕೆ ॥

ವೃ ॥ ಶ್ರೀಯ ಜವ್ವನ[ದ] ರೂಪಿನ ಗಾಡಿಯ ಪೆಂಪಿನೊಂ।
ದಾ[7]ಯು ತಾನೆ ನಡೆತಪ್ಪವೊಲೊಪ್ಪಿರೆ ಬಂದಭಿ ॥
ಪ್ರಾಯಸಿದ್ಧಿಯನೆ ಚಿಂತಿಸುತುಂ ಮನದೊಳ್ ಜಯು ।
ಶ್ರೀಯ ದೂದವಿವೊಲಾಸತಿ ಕಂಡು ಶಿಖಂಡಿಯುಂ ॥ 341

ಅಪರಾರ್ದ್ಧಕ್ಕೆ ॥

ನಿಗಳಂಬೊಲ್ ತೊಡರ್ದಿರ್ದ್ದ ಮೋಹನಿಗಳಂ ನಿರ್ವ್ಯಾಕುಳಂ ಪಿಂಗೆ ಮ ।
ತ್ತಗಜೇಂದ್ರಂಬೊಲಲಗ್ಗಳಂ ವ[8]ನಮನಂದಾನಂದದಿಂ ಪೊಕ್ಕನಾ ॥
ವಗಮಾದಳ್ಗಳುಕ್ಕೆಯಿಂ ಮಕುಟಬದ್ಧರ್ ನೂರ್ವ್ವರಂತಲ್ಲಿ ದೀ ।
ಕ್ಷೆಗೊಳಲ್ ತನ್ನೊಡನೋಗೆ ನಿಶ್ಚಿತಮನಂ ಶ್ರೀಚಂದ್ರಭೂವಲ್ಲಭಂ ॥ 342

1 ಮುವುಳ್ಳುಂ. 2 ಕದೊ. 3 ವೋಲೆನಲಕ್ಕುಂ. 4 ಸುರೂಪಿ. 5 ಮಹಾಂಶಂ. 6 ಚಕ್ರಂ. 7 ದಾಯು. 8ವರನು.

## ಸೂತ್ರಂ ॥ 76 ॥

ತನಮಿಕೆಯುಮೆಂಬಿವ್ರಂ ಚೇ ।
ತನಭಾವದೊಳಕ್ಕುಮುೞಿದ ಭಾವಾರ್ತ್ಥದೊಳಂ ॥
ತನಿತಱೊಳಂ ಪ್ರ ಕೆಯೆಂಬಿವ್ರು ।
ಜನಿಯಿಕುಮಂತಲ್ಲಿ ಕದ್ವಿರುಕ್ತಿ ವಿಕಲ್ಪಂ ॥ 343

ಪ್ರಯೋಗಂ ॥

ಕಂ ॥ ಕಡುಗಲಿತನಮುಂ ಚಾಗದ ।
ಪೊಡಪ್ಪುವೊ[1]ಳ್ನುಡಿಯೊಳಾದ ಮಾನಸಿಕೆಯುಮು ॥
ಕ್ಕಡುಗದ ಶೌಚಮುಮಾಯದ ।
ಪಡೆವಾತುಂ ಪೆರ್ಮೆವ[2]ಡೆದುವವನಿಂದಿಳೆಯೊಳ ॥ 344

ಪರಾರ್ದ್ಧಕ್ಕೆ ॥

ಕಂ ॥ ವಾ[3]ರಧಿಯದೊಂದು ಗುಣ್ಪಂ ।
ಧಾರಿಣಿಯ ಪೊಗೞ್ತೆವೆತ್ತ ಪೆಂಪಿನ ತಿಣ್ಪಂ ॥
ಮೇರುವಿನ ಬಿಣ್ಪುಮಾನೃಪ ।
ಧೀರನೊಳೊಂದಾಗಿ ನಿಂದುವೆನ್ನದರೊಳರೇ ॥ 345

ನಮಿತಾರಂಗೆ ದಮಿತಾರಿಗೆ ।
ಸಮಸ್ತಧಾತ್ರೀವಿಭಾಗದೊಳ್ ಭಾವಿಸೆ ವಿ ॥
ಕ್ರಮದ ನಿಮಿರ್ಕ್ಕೆಗಮಾಯತಿ ।
ಯುಮರ್ಕ್ಕೆಗಂ ಪೇ[4]ೞ ಪೋಲ್ಕೆಗಾವಂ ಬರ್ಪ್ಪಂ ॥ 346

ಕಕಾರದ್ವಿತ್ವಕ್ಕೆ ॥

ಕಂ ॥ ಬೇಸಱದಾಸಱದೆ ವನಾ ।
ವಾಸಂಗಳೊಳುನ್ನತಿಕ್ಕೆ ನಿ[5]ಲೆ ನಮೆದವರೊಳ್ ॥
ನೇ[6]ಸನ್ನಿಕೆಯಿಂ ಕುರುಪತಿ ।
ಬೀಸರಮಂ ನುಡಿಯದೊಳ್ಳಿತಂ ನುಡಿದಪನೇ ॥ 347

## ಸೂತ್ರಂ ॥ 77 ॥

ಒನ್ದೆರಡು ಮೂಱು ನಾಲ್ಕ ।
ಯ್ದೆನ್ದಿನಿತರ್ಕ್ಕಂ ಬಹುತ್ವವಾಚಿಗಳ[7]ಮರ್ದಂ ॥
ತೊನ್ದಿ ನೆಗೞ್ಗಂ ವಿಕಲ್ಪಂ ।
ಸನ್ದಿಸಿ ನೆಲಸಿರೆ ಮೆಯೆಂಬುದಕ್ಕುಂ ಸೂಱೊಳ್ ॥ 348

---

1 ಪೊನ್ನಾರ್ತ. 2 ಪಡೆಗುಮವನಿಂ. 3 ವಾರಿನಿಧಿಯೊಂದು. 4 ಪೇಲಬ್ಬಾಪ್ಗರ್ಕ್ಕೆ. 5 ನಿಶೆ. 6 ನೀಸನ್ನಿಕೆ.
7 ಳಮರ್ದರ್ತಿತ್ರಿಂದಿ.

ಪ್ರಯೋಗಂ ॥

ವೃ ॥ ಶಯುದಂಷ್ಟ್ರಾವಿಷದಂಶವೊಂದೆ ಜತುಗೇಹೋದ್ದೀಪನಂ ತಾನದೊಂ ।
ದೆ ಯುಧೇಷ್ಟ[1]ಪ್ರಕೃತಂ ದುರೋದರಜಯಂ ಮತ್ತೊಂದೆ ಕಷ್ಟಪ್ರತಿ ॥
ಕ್ರಿಯೆ[2]ಯುಷ್ಪ್ರವಿಷದೂಷಿತಾಶನರುದಂತೇನೊಂದೆ ಪೇೞ್ವಾಗಳೊ ।
ರ್ಮಡಿಯೊ ಪೇ[3]ೞೆರ್ಮಡಿಯೊ ಮೂರ್ಮಡಿಯೋ ಕುರುಕುಳಪ್ರಾರಬ್ಧದುರ್ವೃತ್ತಕಂ ॥ 349

ಕಂ ॥ ನೂರ್ಮಡಿ ಪಶು ಕಱೆವುದಂ ತಾ ।
ನೊರ್ಮಡಿಯೆ ಕಱೆವೆರ್ಮಡಿಯಲ್ಲದೆಱಿಯೆರ್ಮಡಿಗಳೇ ॥
ಯೆರ್ಮಡಿಗಳೊಳಗಿಲ್ಲೆನಿಸಿ ।
ದ್ದೆರ್ಮಡಿಯು ಪಿಂಡುಗಳಿನೊಪ್ಪುಗುಂ ಕೆಲವೆಡೆಯೊಳ್ ॥ 350

ವಿಕಲ್ಪಕ್ಕೆ ॥

ವೃ ॥ ತನಗಿಂಬಪ್ಪುದನಾಯ್ದು ನೋಡಿ ಪಲವುಂ ಬಿಲ್ವಿಲ್ಲಗಳೊಳ್ ಬಿಲ್ಲನೊಂ ।
ದನೆ ಕೊಂಡೇಱಿಸಿ ನೀವಿ ಜೇವೊಡೆದಡುತ್ತೊರ್ದಂಬಿನಿಂದೊಂದು[4] ಸೂ ॥
ೞ್ವನೆಯಂ ಪಾವಿನ ಪನ್ನೊಳಾದುವನತಿಪ್ರಾರಂಭದಿಂದೇಱುವಂ ।
ಜನಕಾಧೀಶತನೂಜೆಯಾಣ್ಮನಿಸುವಂತೆಚ್ಚಂ ಮಹೇಂದ್ರಾಂ[5]ತಕಂ ॥ 351

ಸೂತ್ರಂ ॥ 78 ॥

ಆಳಿಪ್ರತ್ಯಯಮಕ್ಕುಂ ।
ಶೀಳಾದ್ಯರ್ತ್ಥಂಗಳಂ ವಿವಕ್ಷಿಸೆ ಪೆಱತೊಂ ॥
ದಾಳಾಪವಂತದೇನೊ ಯ ।
ಥಾಳೋಕನಿರೂಪಿತೋಕ್ತಿಗಳನುಸಾರಂ ॥ 352

ಪ್ರಯೋಗಂ ॥

ಕಂ ॥ ಮಾಱಾಳಿಯುಮೋದಾಳಿಯು ।
ಮೇೞಾಳಿಯುಮಪ್ಪನಾಗಿ ಪ[6]ಡೆವಾಳಿಯೆ ಕೇಳ್ ॥
ನೀಱಿಂ ಜೂದಾಳಿ ಕರಂ ।
ನೀಱಿಂ ಮಾತಾಳಿ ಕರೆಯೆ ಸಿಗ್ಗಾಳಿಯಿ[7]ವಳ್ ॥ 353

ಸೂತ್ರಂ ॥ 79 ॥

ಅದುವಿದುವುದುವೆಂಬಿಂತೀ[8] ।
ವಿದಿತಾರ್ತ್ಥದ ಸರ್ವ್ವನಾಮಶಬ್ದಕ್ಕಕ್ಕುಂ ॥
ತದುಪಾಧಿವಿಹಿತಪ[9]ರಿಮಾ ।
ಣದೊಳನಿತಿನಿತೆನಿತೆನಿಪ್ಪ ರೂಪನಿಪಾತಂ ॥ 354

---

1 ಷ್ಟಂಪ್ರಕೃತಂ. 2 ಯುಮುಪ್ಪಾ. 3 ಪೇೞಿ. 4 ದಸೂ । ಱನೆಯಂ. 5 ದ್ರಾತ್ಮಕಂ. 6 ಪಡಪಾಳ್. 7 ಯಿವಂ. 8 ತಿವು. 9 ಪರಿಗಾಮ.

ಪ್ರಯೋಗಂ ॥

ವೃ ॥ ಅನಿತೊಂದಣ್ಮಿನಿತೊಂದು ದರ್ಪ್ಪಮನಿತೊಂದೌದ್ಧತ್ಯಮುಂ ಮುನ್ನಮಾ ।
ದನೊಳಿನ್ನಪ್ಪನೊಳುಂಟೆ ದಾನವರೊಳೆಂಬುದ್ವೃತ್ತನಂ ನಾರಸಿಂ ॥
ಹನ ರೂಪಿಂ ನಖದೊಳ್ ವಿದಾರಿಸಿ ಕುಸುಂಭಾರಕ್ತಮಂ ಪೆಟ್ಟಗಾ ।
ಱನೆ ಮಾಸಂ ತ[1]ವೆ ತೋಡುವಂತೆ ಕರುಳಂ ನಿಂ ತೋಡಿದೈ ದೈತ್ಯನಾ ॥ 355

ಕಂ ॥ ಇನಿತಱಲುಮಿನಿತು ಮಱುಕಮು ।
ಮಿನಿತು ಮನಃಕ್ಷತಮುಮಾವನಿಂದಾದುದವಂ ॥
ಗಿನಿತಱಲನಿನಿತು ಮಱುಕಮ ।
ನಿನಿತು ಮನಃಕ್ಷತಮನ[2]ಬ್ಬ ಮಾಡದೆ ಮಾಣೆಂ ॥ 356

ಜನನೀಜನಕಸಹೋದರ ।
ವನಿತಾಸುತಪೌತ್ರಮಿತ್ರಸಂಬಂಧಮದಂ ॥
ತೆನಿತೆನಿತು ಭವದೊಳಾಯ್ತು ।
ಲ್ಲೆನಿತೆನಿತಂ ನೆನೆವುದೆನಿತನವಧರಿಸುವುದೋ ॥ 357

ಇವಕ್ಕೆ ದ್ವಿತ್ವಪ್ರಯೋಗಮುಂ ಸೂತ್ರನಿರ್ದೇಶದೊಳ್ ಜ್ಞಾಪಕಸ್ಥಿ[3]ತಮಕ್ಕುಂ ॥

ವೃ ॥ ಕಾಯಲುಂ ಬಲಗರ್ವ್ವದಿಂ ನೆಲನೆಲ್ಲಮಂ ನೆಲಕೆಲ್ಲಮಾ ।
ತ್ತಿರ್ಯಲುಂ ತನಗಾಚತುರ್ಭುಜಮುಂ ಭುಜದ್ವಯಮಾದನಿ ॥
ತ್ತಾಯುದಾಯತಿ ತೋಳೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತ್ತಿನಾ ।
ರಾಯಣಂ ದಯೆಗೆಯ್ಗೆ ಚಾ[4]ಗಚತುರ್ಭುಜಂ ಗರುಡಧ್ವಜಂ ॥ 358

ಎನಿತ್ತನಿತ್ತಂ ಭುಜಪತ್ರನೇತ್ರೆಯಾ ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತಂ ವನದೊಳ್ ವನೇಚರಂ ।
ತನತ್ತು ಬಿಲ್ಲಾನದನನ್ತು ಕೀಸುಗುಂ[5] ॥ 359

## ಸೂತ್ರಂ ॥ 80 ॥

ಮತ್ತಮವಕ್ಕರ್ಕ್ಕುಂ ಸಮು ।
ಪೊತ್ತನಕಾರಂ ಪ್ರಕಾರಕಾಲಾರ್ತ್ಥಂ ಮೆ ॥
ಯ್ವೆತ್ತಿರೆ ತುದುವೆಂಬಿವು ವಿ[6] ।
ದ್ಯೋತ್ತಮರೀತೆಱದಿನಱಗೆ ಪೆಱವುಮನಿ[7]ದಱೊಳ್ ॥ 360

ಪ್ರಯೋಗಂ ॥

ಪ್ರಕಾರಾರ್ತ್ಥಕ್ಕೆ ॥

ವೃ ॥ ಅಂತು ಕಾಡುಗುಮೆ ಲೋಕಮನಿಂದ್ರಂ ।
ಗಂತು ಮಾಡುಗುಮೆ ಬನ್ನಮನೋರ್ವ್ವಂ ॥
ಅಂತು ಸೂಡುಗುಮೆ ಕೇಸುರಿಯಂ ಪೇ ।
ಱಂತು ಕೂಡುಗುಮೆ ಬೀ[8]ರಮದಾಗ್ರಂ ॥ 361

1 ಅನೆ, ಆನೆ. 2 ನಬೆ. 3 ಪಿಥ್ಥ. 4 ಭಾಗ. 5 ನಂ. 6 ವಿ । ದೃತ್ತಮು. 7 ನಿವಜ್ಞುಪೆಳ್. 8 ಸಾಹಸವಾ.

ಕಂ ॥ ಇಂತಿಂತೆ ಪಲಬರುಂ ತ ।
ತ್ಸಂತತಿಯೊಳ್ ಕೞಿದು ಪೋಗೆ ಜನಿಯಿಸಿದಂ ದು ॥
ಷ್ಯಂತಂ ದುಷ್ಯಂತಂಗಮ ।
ನಂತಗುಣಂ ಭರತರಾಜನಾ[1]ದಂ ತನಯಂ ॥ 362

ಎಂತೆಡಱಿದಯೆಂತುಕ್ಕಿರ್ದ ।
ಯೆಂತೊವವಿದಯೆಂತುಮಗುೞ್ದಯೆಂತೊದಱಿದಮಾ ॥
ಯ್ತಂತೆನಗಿದಿರ್ಚ್ಚಿರ್ದಯೆ ಮಗು ।
[2]ೞ್ಗಂ ತೊಡರದಿರೆನೆ ಸಿತಾಶ್ವನೆಂದಂ ಕರ್ಣ್ಣಂ ॥ 363

ಕಾಲಾರ್ತ್ಥಕ್ಕೆ ॥

ವೃ ॥ ಮುನಿಸಿಂ ಮೇಲೆತ್ತಿ ಬರ್ಪ್ಪಂದಿನ ವಿಪುಳಶಿಲಾಸ್ತಂಭಮಂ ಕೀೞಿ ಕೀೞ್ವಂ ।
ದಿನ ಬೆಂಕೊಂಡಟ್ಟಿ ಕೊಲ್ವಂದಿನ ತಿರಿಪಿ ಕಪಿತ್ಥಾವನೀಜಾತದಿಂದಂ ॥
ಬನದೊಳ್ ಮೆಯ್ವೆರ್ಚ್ಚಿ ಪೊಯ್ವಂದಿನ ನಿಜಭುಜವಿಕ್ರಾಂತಮೇನಾದುದಿಂತೀ ।
ಜನಮೆಲ್ಲಂ ನೋಡೆ ಚಾವಟ್ಟದ ಬಿಸುವುಡಿಯೊಳ್ ಬಿೞ್ದು ಸ್ವಾವಂತುಟಾಯ್ತೇ ॥ 364

ಇಂದು ಪಿಂಗಿದುವೆಮ್ಮ [3]ಪೇೞೆಗಳೆಂದು ಸಾರ್ದ್ದುವು ಸಮ್ಪು ತಾ ।
ವಿಂದಮೋಘಫಲಂಗಳಾದುವು ಯಜ್ಞದಾನಸಮಾಧಿಗಳ್ ॥
ಇಂದು ನಂಬಿದೆವಾಮುಮೆಮ್ಮ ನೆಗೞ್ತೆಯೊಳ್ಪನದಲ್ಲದೆ ।
ವಿಂದುವಂಶಮುಮಿಂದು ನಿರ್ಮ್ಮಳಮಾದುದಿಂದ್ರಧರೋಪಮಾ ॥ 365

ಕಂ ॥ ಎಂದಮರರನರೆಯುಟ್ಟುವೆ ।
ನೆಂದಮರಾವತಿಯನೀೞ್ದುಕೊಳ್ವಂ ಶಕ್ರಂ ॥
ಗೆಂದಭಿಭವಮಂ ಮಾಡುವೆ ।
ನೆಂ[4]ದಲ್ಲಿ ಪಲುಂಬಿ ಚಿಂತಿಕುಂ ದನುತನಯಂ ॥ 366

ಅಲ್ಲಿ ಪೆಱವು ಗ್ರಹಣಕ್ಕೆ ॥

ವೃ ॥ ವಿರಹದೊಳಾದ ವೇದನೆಯನಾಱಿಸಲಾಮರನೊಳ್ಳಿತೆಂದು ಮಾ ।
ಮರದ ನೆೞಲ್ಗೆ ಪೋಪೆ ಗಡ ಕಾಮನ ಡಾಮರಮಲ್ಲಿ ಕೋಕಿಲೋ ॥
ತ್ಕರರ[5]ವಮಲ್ಲಿ ಚಾವಳಿಪ ರಾಜಶುಕವ್ರಜಮಲ್ಲಿ ಕಾಯ್ದು ಪ ।
ಲ್ಮೊರೆವ[6]ಮದಾಳಿಯಲ್ಲಿ ಸಖಿ ಸಾರದಿರಾಮರನಂ ವಸಂತದೊಳ್ ॥ 367

ಸೂತ್ರಂ ॥ 81 ॥

ಗಣನಾವಿಶೇಷಪರಿಪೂ ।
ರಣದೊಳಮನಿತಿನಿತೆನಿತು ಶಬ್ದಂಗಳ ಪೂ ॥
ರಣದೊಳಮನೆಯಪ್ರತ್ಯಯ ।
ಮೊಣರ್ದು ಸಮಂತೊಂದಿ ತೋಱುಗುಂ ತದ್ಧಿತದೊಳ್ ॥ 368

1 ನಂ ಬಂ, 2 ಬ್ಬಂ. 3 ಪೇಶ. 4 ನೆಂದೆಂದು. 5 ದುಲಿಪಲ್ಲಿ. 6 ಪಳಮಾಲೆ.

ಪ್ರಯೋಗಂ ||

ಕಂ|| ಜಿನಮದನರೊಳಗೆ ಪದಿನಾ |
ಱನೆಯಂ ತತ್ಸಕಲಚಕ್ರವರ್ತ್ತಿಗಳೊಳಗ ||
ಯ್ದನೆಯುನೆನೆ ಪುಣ್ಯಪುಂಜಾ |
ರ್ಜ್ಜನಕ್ಕೆ ಶಾಂತೀ[1]ಶನಂತು ನೋಂತರು[2]ಮೊಳರೇ || 369

ಇನಿತನೆಯ ಭವದೊಳಿಂತಾ |
ಯ್ತಿನಿತನೆಯ ಭವಾಂತರಂಗಳೊಳ್ ಮತ್ತಂ ಮೇ ||
[3]ಲಿನಿತು ಸುಖದುಃಖಫಲಮುಂ |
ಜನಿಯಿಕುಮೆಂದಱಿವುದರಿದು ಸಂಸೃತಿಗತಿಯೊಳ್ || 370

## ಸೂತ್ರಂ || 82 ||

ಇರೆ ತದ್ಧಿತಪ್ರಯೋಗಂ |
ಪರದೊಳ್ ಚರಮಸ್ವರಕ್ಕೆ ಲೋಪಮದಕ್ಕುಂ ||
ನಿರವಿಸಿ ಮುನ್ನೆ ಸಮಾಸಂ |
ತರದೊಳ್ ಪೇೞ್ದೊಂದು ಕಾರ್ಯ್ಯಮುಂ ಬಂದಿರ್ಕ್ಕುಂ || 371

ಪ್ರಯೋಗಂ ||

ವೃ || ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳೊಂದುಃ ,
ತುಟ್ಟು ಪೆಣ್ಣುಡೆಯನಾ[4]ಡಿಸಿ ಬಾಲ್ಯ ಃಖಂಡಿ ಮುಂ ||
ನೆಟ್ಟನರ್ಜ್ಜನನ ಸಾರಥಿಯೆಂಬುದನೀಗಳೀ |
ಘಟ್ಟವರ್ತ್ತಿ ನುಡಿದಳ್ ತಿಳಿವಂತೆಮಗೆಲ್ಲಮಂ || 372

ಒರ್ಮ್ಮ ಪೋಗಿ ಮೃಗಯಾನಿಮಿತ್ತದಿಂ |
ಧರ್ಮ್ಮಮಂ ಮಱೆದು ನೋ[5]ಡ ಬೇಡಿದೊಂ ||
ಪೆರ್ಮ್ಮಗೆಟ್ಟು ಜಮದಗ್ನಿಯಂ ನೃಪಂ |
ದುರ್ಮ್ಮದಂ ಸುರಭಿಯಂ ವಿಮೋಹದಿಂ || 373

ಇದು ಶಬ್ದಸ್ಮೃತಿಯೊಳ್ ತದ್ಧಿತಪ್ರಕರಣಂ ||

---

1 ಶ್ರೀಶ. 2 ವರೊಳರೇ. 3 ಗಿನಿತು. 4 ನಾಟಿಸಿ. 5 ನೋಱ.

## ಆಖ್ಯಾತಪ್ರಕರಣಂ.

### ಸೂತ್ರಂ ॥ 83 ॥

ಭೂತವತಿ ವರ್ತ್ತಮಾನಂ ।
ಖ್ಯಾತಭವಿಷ್ಯಂತಿ ಸರ್ವ್ವಸಾಧನಿಯೆಂ[1]ಬಾ ॥
ಖ್ಯಾತವಿಭಕ್ತಿಗಳಕ್ಕುಮು ।
ತೀತಭವದ್ಭಾವಿಕಾಲವಿಧ್ಯಾದಿಗಳೊಳ್ ॥ 374

ಪ್ರಯೋಗಂ ॥

ಭೂತವತಿಗೆ ॥

ವೃ ॥ ತ್ರಿಭುವನರಾಜ್ಯಪಟ್ಟದೊಡವುಟ್ಟದನಾವಿಭು ಪುಟ್ಟಿದ[2]ನ್ತ್ತು ತಾಂ ।
ರಭಸದೆ ಸಿಂಹವಿಷ್ಟರಮನೇಱಿದನೆತ್ತಿದೆ ತಾನೆ ಮುಂದೆ ಬಂ ॥
ದಭಿಮತಮಪ್ಪ ಬೆಳ್ಗೊಡೆಗಳುಂ ನೆಗೆದೊಪ್ಪಿದುವಿಂತೆ ದಲ್ ಜಗ ।
ತ್ಪ್ರಭುತೆ ಜಗತ್ತ್ರಯಂಗಳೊಳಗಗ್ಗಳಮಾದುದು ದೈತ್ಯರಾಜನಾ ॥ 375

ವರ್ತ್ತಮಾನಕ್ಕೆ ॥

ವೃ ॥ ಎಸಗಿದುದೀಗಳೀಗಳಿನಿಸೊಯ್ಯನೆ ತೆಂಕಣ ಗಾೞಿ ಕೋರಕ ।
ಪ್ರಸರದಿ[3]ನೀಗಳೀಗಳೆಸೆದ[4]ಪ್ಪುದು ಚೂತಮಹೀಜಮೆಯ್ದೆ ರಾ ॥
ಗಿಸಿ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ ।
ಱಿಸಿದಪನೀಗಳೀಗಳೆಲೆ ಸುಗ್ಗಿಯದೊಂದು ಪೊಡರ್ಪ್ಪದಾಗದೇ ॥ 376

ಭವಿಷ್ಯಂತಿಗೆ ॥

ವೃ ॥ ಕಡುಕೆಯ್ದಾಂತನ್ನಸೈನ್ಯಂಗಳನಳುಱೆ ಭರಂಗೆಯ್ದು ನಿಮ್ಮೊಂದೆ ಮೆಯ್ಯೊಳ್ ।
ಕಿಡಿಸಲ್ ಸಾ[5]ಲ್ವಿರ್ ಸಮಾಸಾದಿತರಣರಸಿಕರ್ ನಿಮ್ಮ ಮುಂದಾದಮುಣ್ಮಂ ॥
ನುಡಿವಾಗಳ್ ನಾ[6]ಡೆ ಲಜ್ಜಾಕರಮದಱಿನದಂತಿಕ್ಕೆ ಜೀಯೆಂಬಿನಂ ಮಾ ।
ರ್ಪಡೆಗೆನ್ನೀಬಾಳಕೇಳೀವಿಳಸ[7]ನಮನದಂ ಯುದ್ಧದೊಳ್ ನಾಳೆ ತೋರ್ಪ್ಪೆಂ ॥ 377

ವಿಧ್ಯಾದಿಗೆ ॥

ಕಂ ॥ ಮಾ[8]ರ್ಚ್ಚದಿರು ಬಸನಮಂ ಗಿಳಿ ।
ಗರ್ಚ್ಚದಿರು ಖಳಸ್ವಭಾವಮಂ[9] ಮನೆಯತ್ತಲ್ ॥
ಸೇರ್ಚ್ಚು ಹಿತರಪ್ಪರಂ ಸಲೆ ।
ಪೆರ್ಚ್ಚಿಸು ತಳವರ್ಗ್ಗಮಂ ಮನಂಗೊಳೆ ಮಗನೇ ॥ 378

1 ಯೆಂದಾ. 2 ದತ್ತಿರಾ. 3 ದೊಳೀ. 4 ಎದ್ದರ್ಗಮ. 5 ಸಾಲ್ವಿರ್. 6 ನೋಡೆ. 7 ಸಿತಮ. 8 ಮುಚ್ಚಲಸು. 9 ದೊಳಮು.

## ಸೂತ್ರಂ ॥ 84 ॥

ಕವದಿನಮುರಯಿರೆನೆವೆನಿ ।
ಪ್ರವೃ ವರ್ತಿರ್ಕುಮನ್ಯಯುಷ್ಮದಸ್ಮದ್ವಿಷಯು ॥
ವ್ಯವಹೃತಿಗಳ್ಗೇಕಾನೇ ।
ಕವಚನದಿಂ ಪ್ರತಿವಿಭಕ್ತಿ ಪುರುಷಾಖ್ಯಂಗಳ್ ॥ 379

ಪ್ರಯೋಗಂ ॥
ಪ್ರಥಮಪುರುಷಕ್ಕೆ ॥

ಕಂ॥ ತೊಟ್ಟಂ ಸಂಮೋಹನಮಂ ।
ತೊ[1]ಟ್ಟನೆ ಭುಜವಿಜಯಶಾಲಿ ಫಲ್ಗುಣನಾಗಳ್ ॥
ಪುಟ್ಟಿದ ನಿದ್ರಾಭ[2]ರದಿಂ ।
ದೊಟ್ಟೈಸಿ ವಿರೋಧಿಭೂಭುಜರ್ ಮೆಯ್ಮರೆದರ್ ॥ 380

ಮಧ್ಯಮಪುರುಷಕ್ಕೆ ॥

ಕಂ॥ ನುಡಿದಯ್ ಪೊಚ್ಚಜವಾತಂ ।
ಬಿಡದೆನ್ನೊಳ್ ಜಲಜಸುತಿಪೂರ್ವದಾವುದು ಗಂಡು ॥
ಳ್ಳೊಡೆ ಮೊನೆಗಿದಿರ್ಚಿ ಬರವೇೞ್ಟಿ ।
ತೊಡದರ್[3]ಗಳ್ ಕಾಣ್ಬರೆಮ್ಮ ನಿಮ್ಮೊಂದಳವಂ ॥ 381

ಉತ್ತಮಪುರುಷಕ್ಕೆ ॥

ಕಂ॥ ಅಸುರಹರಂ ತೇರಂ ಸ ।
ಯ್ತುಸಗುವನಾಂ ಕೀಱಿ ನಿಂದು ಬಿಲ್ಗೊಳ್ವೆನೆಸಲ್ ॥
ವಿಸಸನಮುದಾವುದರಿದ ।
ಕ್ಕರ್ಣಸೂನುವಂ ಕೊಂದೆನೆಂದು ನಿಶ್ಚಿಂತಮಿರಿಂ ॥ 382

## ಸೂತ್ರಂ ॥ 85 ॥

ಮಿಗದಾಸ್ವಾರ್ತ್ಥದೊಳಂತವು ।
ನೆಗೞ್ಗುಂ ತಂತಮ್ಮ ಸಾಧನಂಗಳೊಳನಿತುಂ ॥
ಯುಗಪತ್ಪ್ರಯೋಗಮಾವಂ ।
ದು ಗಣನೆಯೊಳ್ ಮುಂದೆ ನಿಂದುದಾವುದದಕ್ಕುಂ ॥ 383

ಪ್ರಯೋಗಂ ॥
ಸ್ವಾರ್ತ್ಥಕ್ಕೆ ॥

ವೃ॥ ಎಂದಿಂತಾತನನಂದು ನಂಬಿಕೊಡಾಮುತ್ಪ್ಯತ್ತಜಂ ನಂಬಿ ಸಾ ।
ನಂದಂ ಬಂದು ಸುರೇಂದ್ರಸೂನು ನೀ ತಾಱಿಲ್ಗೆಯ್ದುಂವನಾನಿನ್ನೆಗಂ ॥
ಬ[4]ಂತ ಕೆ ನೀಂ ದಯೆಯಿಂದವಮಾನಱಿದೆನಿಲ್ಲೀಗಳ್ ಮಾನಂದಮೆನಿ ।
ನ್ನೊಂದುಂ ಸಂದೆಯಮಿಲ್ಲ ತೇರನೆಸಲೆಂ ನೀಂ ಕಾದಿ ಗೆಲ್ ಫಲ್ಗುನಾ ॥ 384

---

1 ನಟ್ಟನೆ. 2 ಭರವಿರದೊಟ್ಟೈಸೆ. 3 ವಾಗಡೆ. 4 ಬಂಧನೊಳಂತವುಯಿಂದಿರದಯೆಯಿಂದವಾ.

ಯುಗಪತ್ಪ್ರಯೋಗಕ್ಕೆ ॥

ಕಂ ॥ ಆವುಂ ದ್ರೋಣರುಮಶ್ವ ।
ತ್ಥಾಮನುಮಂಗಾಧಿರಾಜನುಂ ಕೃಪನುಂ ಸಂ ॥
ಗ್ರಾಮದೊಳಾಂಪೆವರಾತಿಯ ।
ನೇವಮಾತಡಿಯೆತ್ತು ತಡೆಯದಿರ್ ಭುವನಪತೀ ॥ 385

## ಸೂತ್ರಂ ॥ 86 ॥

ದದಪವಕಾರಂಗಳ್ ಮೂ ।
ಲದೊಳಕ್ಕುಂ ಭೂತವರ್ತ್ತಮಾನಭವಿಷ್ಯ ॥
ದ್ವಿದಿತವಿಭಕ್ತಿತ್ರಿತಯ ।
ಕ್ಕದೆಲ್ಲವಚನಂಗಳೊಳವಿ[1]ದಾಗಮಮಕ್ಕುಂ ॥ 386

ಪ್ರಯೋಗಂ ॥
ಭೂತವತಿಗೆ ॥

ವೃ ॥ ಆಡಿದನಿಂದ್ರನಿಂದ್ರಗಣಿಕಾಗ[2]ಣಮಬ್ಜಜೊಳೊಲ್ದು ಮಂಗಳಂ ।
ಬಾಡಿಮದಬ್ಜಜಂ ಪರಸಿ ಸೇಸೆಯನಿಕ್ಕಿದನದ್ರಿ ತಾನೆ ಮುಂ ॥
ಪಾಡಿ ವಿಭೂತಿಯಿಂದೊಸಗೆಮಾಡಿದನಂಗಜನಂಗಲಕ್ಷ್ಮಿಯೊಳ್ ।
ಕೂಡಿದನೆಂದೊಡೇವೊಗಳ್ವುದೋ ಭವಶೈಲಭವಾವಿವಾಹಮಂ ॥ 387

ವರ್ತ್ತಮಾನಕ್ಕೆ ॥

ಕಂ ॥ ಮಾಡಿದಪಂ ಖಳಸಮಿತಿಗೆ ।
ಕೇಡಂ ತಕ್ಕರನುದಾತ್ತಮಹಿಮೋನ್ನತಿಯೊಳ್ ॥
ಕೂಡಿದಪಂ ನೀಡಿಲ್ಲದೆ ।
ನೀಡಿದಪಂ ಬೇಳ್ಪವಂಗೆ ಬೇಳ್ಪುದನಿಂದ್ರಂ ॥ 388

ಭವಿಷ್ಯಂತಿಗೆ ॥

ವೃ ॥ ಬರ್ಪ್ಪನವೋಘಮಬ್ಧಿಸಮಯಕ್ಕೆ ಪಲುಂಬದೆ ಮಾರುತಿವರ್ಪ್ಪದಾಂ ।
ಬರ್ಪ್ಪದನೆಂದು ಪೋದನಿನಿದುಂ ಜಲದಾಳಿಗಳಿಂತಿವೇಗಳೇ ॥
ಬರ್ಪ್ಪವೆ ಬಂದನಿಲ್ಲ ತಡೆದಂ ಪರದೇಶದೊಳಾದ ಮರ್ಚ್ಚನಿಂ ।
ಕೂರ್ಪ್ಪಡೆ ಪರ್ಬ್ಬರಲ್ಲದೊಡೆ ಬರ್ಪ್ಪರೆ ಕಲ್ಲೆರ್ದೆಯಪ್ಪ ಮಾನಸರ್ ॥ 389

## ಸೂತ್ರಂ ॥ 87 ॥

*ಭಾವಿಭವತ್ಕಾಲಂಗಳೊ ।
ಳಾವಿಹಿತವಿಭಕ್ತಿಯಾದಿ[3]ಗಳೊಳಾಗಮದಿಂ ॥
ತಾವೊಲ್ವರ್ ಕೆಲಬರ್ ಭಾ ।
ಷಾವಿದರುದ್ವಾದಿಯಕ್ಕುಮದುಮಂ ಪ್ರಾಯಂ ॥ 380

1 ಗಿವಾಗಮ. 2 ಜನ. 3 ದ. * ಒಂ ೧ ಪ್ರತಿಯಲ್ಲಿ ಈ ಸೂತ್ರವೇ ಇಲ್ಲ.

## ಸೂತ್ರಂ || 88 ||

ಅವಱೊಳಗೆ ನಪುಂಸಕಲಿಂ |
ಗವಿಷಯಮಾದಲ್ಲಿ ಮೊದಲ ಪುರುಷಂಗುದುಮೆಂ ||
ಬುವೆ ದಲ್ ಸಮನಿಸುಗುಂ ಸ್ತ್ರೀ |
ವಿವಕ್ಷೆಯೊಳ್ ನೆಗಳ್ಗುಮೇಕವಚನಮುಳ್ಳಂತಂ || 391

ಪ್ರಯೋಗಂ ||

ಕಂ || ಊದಿದುದು ತಣ್ಣೆಲರ್ ಕಳ |
ನಾದಂ ಸ್ವಾ[1]ದರದೊಳೊಂದಿ ನೆಗಳ್ದುದು ಪದ್ಮಾ ||
ಮೋದಮಿ[2]ನಿಸುಂ ತೊವತ್ತೊರ್ವ |
ರಾದುದು ಕೂಗಿದುವು ತಾಮ್ರಚೂಡಕುಳಂಗಳ್ || 392

ಅಱಿವಳ್ ಪಾಂಡುತನೂಜರ |
ತೆಱನೆಲ್ಲಮನೀಕೆ ನುಡಿವಳಲ್ಲಳ್ ತಪ್ಪಂ ||
ಮಱಸಿ ಪುಸಿನುಡಿವ ಜಱುಚರ |
ತೆಱನಂ ಕಂಡಱಿಯದಂತು ಕುಳಿಯರುಮೊಳರೇ || 393

## ಸೂತ್ರಂ || 89 ||

ಅರೆಬರ್ ತದೇಕವಚನಾಂ |
ತರಂ ನಪುಂಸಕದೊಳಾಗೆ ತತ್ತ್ವನ್ಯತರಂ ||
ದೊರೆಕೊಳ್ಗುಮೆಂಬರವು ಮಱಂ |
ತಿರೆ ಪೂ[3]ರ್ದ್ಧಗುಮಮರ್ದಿಕಾರಮಕ್ಕೆಯಕಾರಂ || 394

ಪ್ರಯೋಗಂ ||

ವೃ || ಪುಟ್ಟಿತು ಪುಟ್ಟದು ದಿವಮುಂ |
ಮೆಟ್ಟಿತು ಮೆಟ್ಟದು ರಸಾತ[4]ಳಾಗ್ರಮನೆಂಬೊ ||
ಳ್ಪಟ್ಟಳವಾಗಿರೆ ದಿವಿಜರ |
ದಿಟ್ಟಿಗೆ ಸೊಗಯಿಸಿತು ಮುಂದೆ ಮಂದರಶೈಲಂ || 395

ಉರಗರಗಿದರ್ ದೈತ್ಯರ್ ಕಳ್ಕುತ್ತಿರಳ್ಕಿದನಿಂದ್ರನೀ |
ಶ್ವರನ ಮನಮು[5]ಱ್ಕಿತೊ[6]ಡಿತ್ತು ಕಿನ್ನರಸೈನ್ಯಮಾ ||
ಸರಲ ಬರಮಂ ಕುಡಿಂ ಕಟ್ಟಿತ್ತು ಭಾರತಮೆಂದು ತಃ |
ವರಯೊಲೆಯು ನೀರಂತಾಯ್ತುತ್ತಂ ಸುರಾಸುರಮಂಡಲಂ || 396

## ಸೂತ್ರಂ || 90 ||

ಅವಿಶಿಷ್ಟಲಿಂಗವಚನ |
ವ್ಯವಸ್ಥೆಯಿಂದೊಂದಿ ಗುಂ ಕುಮಾದೇಶಂಗಳ್ ||
ಬವರಿಸುಗುಂ ಸಂಪ್ರತಿಗಂ |
ಭವಿಷ್ಯದರ್ಥದೊಳಮನ್ಯವಚನೋಕ್ತಿಗಳೊಳ್ || 397

---

1 ಗಾಂಧರ. 2 ಮಿನಿಸಂ. 3 ಪೂರ್ವ್ವಗೆಯುಮರ್ಕಾರಮಕ್ಕುವಿಕಾರಂ. 4 ತಳಾಂತಮ. 5 ಮುಳ್ಕಿ.
6 ತೊತ್ತಿತ್ತು.

ಪ್ರಯೋಗಂ ॥

ವೃ ॥ ಮೀಱುಗುವಲ್ಲಿ ದೇವರೆಡೆವೊಕ್ಕೊಡವಮಾತ್ಮಭುಜಪ್ರತಾಪವಂ ।
ತೋಱುಗುಮುರ್ಕ್ಕಿ ದ[1]ನ್ಯನೃಪನಂದನರಂ ತವೆ ಕೊಂದು ನಾಱ್ಗಳಂ ॥
ತೀಱುಗುವಾಗಳ[2]ಲ್ಲಿ ತೊಡರ್ದಾರುವುನುಗ್ರಸತತ್ರಿಭೂರವಂ ।
ಪೇಱುಗುವಂತುವಾಂತೊಡವರಂ ಬಡಿಯೊಳ್ ಪುಡಿಗುಟ್ಟಿ ತೂಱುಗುಂ ॥ 398

ಕಂ ॥ ಅರ್ಕ್ಕೇಂದುಗಳಂ ತವೆ ನುಂ ।
ಗಿರ್ಕ್ಕಂ ಕಱ್ತಲೆ ಸಿಡಿಲ್ಗಳೆಱಗುಗುವಂತುಂ ॥
ಬರ್ಕ್ಕಂ ನಿನ್ನೋಪಳ್ ಭಯ ।
ಮಿರ್ಕ್ಕವೆ ನೀನಿರ್ಪ ಮನದೊಳು[3]ಗ್ರತುಳಾರ್ಕ್ಕ ॥ 399

## ಸೂತ್ರಂ ॥ 91 ॥

ಉಗೆಕೆವಿಕಲ್ಪಿತಮನ್ಯಾ ।
ರ್ತ್ಥಗತಿಯೊಳುತ್ಪ್ರೇಕ್ಷೆಯುಂ[4]ಕ್ತಿ ಯುಷ್ಮತ್ಸಂಜ್ಞೋ ॥
ಕ್ತಿಗಳೊಳಮಸ್ಮದ್ಬಹುವಚ ।
ನಗತಿಯೊಳಂ ನೆಗಲ್ದಿ ಸರ್ವಸಾಧನಿಗಕ್ಕುಂ ॥ 400

ಪ್ರಯೋಗಂ ॥

ಅನ್ಯಾರ್ತ್ಥಗತಿಗೆ ॥

ವೃ ॥ ಮೇದಿನಿ ಸಾಗರಾಂತಮದು ನಿನ್ನನೆ ಪತ್ತುಗೆ ನಿನ್ನ ವಕ್ಷದೊಳ್ ।
ಶ್ರೀ ದೊರೆಕೊಂಡು ಪೆ[5]ರ್ಚ್ಚುವೆರಸಿರ್ಕ್ಕೆ ಸಮುನ್ನತ ನವಗ್ರಹಂಗಳೇ ॥
ಕಾದಶಮಕ್ಕೆ ಕೀರ್ತ್ತಿ ಪರೆದಿರ್ಕ್ಕೆ ಜಯಾಂಗನೆ ಕೂ[6]ರ್ಕ್ಕೆ ಸಿರ್ಚ್ಚಲಂ ।
ವೇದದೊಳೋ[7]ದಿದಾಯು ನಿನಗಕ್ಕೆ ಚಿರಂ ಕಲಿಕಾಲಸೂ[8]ದನಾ ॥ 401

ಯುಷ್ಮತ್ಸಂಜ್ಞೋಕ್ತಿಗೆ ॥

ವೃ ॥ ವಾಯುಸದಂತೆ ನೋಡು ಬಕದಂತಿರೆ ಮೆಲ್ಲನೆ ಪೆಟ್ಟು ಕಚ್ಚಪೋ ।
ಪಾಯದಡಂಗಿ ನಿಲ್ ಭ್ರಮರಿಯೊಳ್ ಭ್ರಮಿಯಂತಿರ ಪೆರ್ಚ್ಚರಾಗು ಖ ॥
ಱ್ಗಯುಧಚಾ[9]ಪರಂ ಪೊಳೆವ ಮಿಂಚನೆ ಪೋ[10]ಲ್ತಿರೆ ಬೀಸು ನೀಂ ಖಳ ।
ನ್ಯಾ[11]ಯದಿನೆಲ್ಲಮಂ ನೆಱೆಯೆ ಕಲ್ತುಪದೇಶಕನಾಗು ಲೋಕದೊಳ್ ॥ 402

ಕಂ ॥ ಹರಿ ನುಡಿಯೆ ನುಡಿಯಿಮುಲಿಯಲಿ ।
ಮಿರಿಮುಸಿರಲಿಮತ್ತಸಾರಿಮೆಲೆ ಮಿಡುಕದಿರಿಂ ॥
ಪಿರಿದುಂ ಗ[12]ಬಿಪಲಿಮೆಡೆಗೊಂ ।
ಡಿರದರಿಮೆನುತಿರೆ ಕಡಂಗಿ ಪಡಿಯಱಿರತ್ತುಂ ॥ 403

---

1 ದಂದು. 2 ಮಲ್ಲಿ. 3 ಳುಗ್ರತಳಕರ್ಕ್ಕ. 4 ಯುಕ್. 5 ಪರ್ಚ್ಚು. 6 ಕೂರ್ಗ್ಗ. 7 ಳೊಂದಿ. 8 ಸಾಧನಾ. 9 ಚಾಪಮಂ. 10 ಪೊತ್ತಿರೆ. 11 ನಾಭ್ಯಮುವು. 12 ಗಳಪಂಮೆಡೆಗೊಂದರದಿಂ

ಅಸ್ಮದ್ಬಹುವಚನಗತಿಗೆ ॥

ಕಂ ॥ ನೆನೆಯದೆ ಕಜ್ಜದ ಬಿಣ್ಪಂ ।
ಮುನಿವರ್ ನೀನೊರ್ವನೆಂಬ ಹರಿಗಮಸಾಧ್ಯಂ ॥
ಮನುಜಪ್ರಕಾರಾಂ[1]ಕನೊ ।
ಆನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್ ॥ 404

ಸೂತ್ರಂ ॥ 92 ॥

ತದುಪಗತಮಧ್ಯಮೈಕ ।
ತ್ವದೊಳಕ್ಕುಂ ಪ್ರಾಯದಿಂದಿಕಾರಮುಕಾರಂ ॥
ವಿದಿತಸ್ವರೂಪಲೋಪಮು ।
ಮದಂತೆ ಪೆಱವುಳ್ಳಿಯೊಳಂ ಪ್ರ[2]ಕೃತ್ಯಂತಮೊಳಂ ॥ 405

ಪ್ರಯೋಗಂ ॥

ವೃ ॥ ಬಿಗಿ ಪುಗು ಬಿ[3]ಟ್ಟು ಕೂಡು ಜಡಿ ಒಗ್ಗಿಸು ಪೊ[4]ಯ್ಮಲೆನೋಡು ಸಾ[5]ಯು ಸಾ ।
ದ್ರ್ದಗಿ ಕೆಳೆ ನೂಂ[6]ಕು ಸಾಚಿರ್ ಕಡೆದೋಱಿಯೊಡಸಂದಿಸು ಸಾರ್ದ್ದು ದಂ[7]ಡೆಗೊಳ್ ॥
ಪುಗದೆಡೆಮಾಡು ಚಪ್ಪರಿಸು ರೂಪಿಡು ಕೂ[8]ಪಿಡು ಕೂ[9]ಪ್ಪುರ್ದೋಱು ಪಾ ।
ಱಗಿಱದೆ ಕೂರ್ಮೆಯಿಕ್ಕು ತ್ರ[10]ಗೆ ತೊಂಗಲನಿಂಚನೆ ನೂಂಕು ಯು[11]ದ್ಧಮಂ ॥ 406

ಸೂತ್ರಂ ॥ 93 ॥

ಕ್ರಿಯೆ ತಾಂ ಕ್ರಿಯಾರ್ತ್ಥಮಪ್ಪ ।
ಲ್ಲಿಯುಮಕ್ಕುಂ ವರ್ತ್ತಮಾನಗತಿಗುತ್ತುಮುತುಂ ॥
ದ್ವಯಮಕ್ಕುಂ ಪೂರ್ವ್ವಭವ ।
ಕ್ರಿಯೆಯೊಳದುತ್ಪ್ರತ್ಯಯಂಗಳಕ್ಕುಂ ಪೀನಂ ॥ 407

ಪ್ರಯೋಗಂ ॥

ಕಂ ॥ ತಿಂಗಳನಪ್ಪಿಕೊಳಲ್ ಪಾ[12] ।
ಱಿಂಗಂ ಬೆಳೆಯಿಕ್ಕಲಮರಗಿರಿಶಿಖರಕ್ಕಂ ॥
ಲಂಗಿಸಲೊಡರಿಸುವರ್ ಪ ।
ರ್ವಂಗಳ್ ಪತ್ತೆಂಟು ದೆವಸಮೆನೆ ಬೆಲೆವೆಣ್ಗಳ್ ॥ 408

ವೃ ॥ ಕೆದಱುತ್ತುಂ ಮಣಲಂ ತೆಮರ್ದ್ದುಕೊಳುತುಂ ಧೂಳೇಱುವಂ ಸೂಸುತುಂ ।
ನದನದ್ಯಚ್ಛಜಲಂಗಳಂ ಮುಱಿಯುತುಂ ಭೂಜಂಗಳಂ ನುಗ್ಗುತುಂ ॥
ಪ್ರೊದಱಿಂ ಸೀಳುತುಮೆಯ್ದೆ ಮಂಚಮನದುಂ ಕಾಡಾನೆಯುಂ ಪೋಲ್ತು ಪೊ ।
ಕ್ಕುದು ಬೀಡಂ ಲಯಕಾಲಕಾಲವಿ[13]ಚಲಧ್ಭೀಮಾರುತಂ ಮಾರುತಂ ॥ 409

1 ರಾಂತನೊ. 2 ಪ್ರಕೃತ್ಯಂತರದೊಳ್. 3 ಬಿಟ್ಟ ಕೂಡ. 4 ಪೊಯ್ಮಲೆ. 5 ಪಾಱ ಸಾಯು. 6 ನೂಂಕ. 7 ಡಗಗೊಳ್. 8 ಕಾಪಿಡು. 9 ಪುಱಪ್ಪುರ. 10 ಪಗೆ. 11 ಬಿಸ್ಮಯ. 12 ಪಾ । ಱಿಗಂಬೆಳೆ. 13 [illegible]

ಕಂ ॥ ನಡುಗಿ ತ[1]ಡವರಿಸಿ ಪೆಂಕೆಯು ।
ಕಡುಗಾಯ್ಪಿಂಗಗಿದು ಜೆಡೆಗೞಡುವಿನೊಳಹಿಗಳ್ ॥
ತೊಡರ್ದು ನುಸುಳ್ದೋಡಿ ಗಂಗೆಯು ।
ಮ[2]ಡುಗಳನಡಹಡಿಸಿ ಪುಗುವಿನಂ ಭಯವಶದಿಂ ॥ 410

## ಸೂತ್ರಂ ॥ 94 ॥

ಪ್ರತಿಷೇಧದೊಳಂ ಕೆಲಬರ ।
ಮತದಿಂದಲ್ ವರ್ತ್ತಿಕುಂ ಪದಾಂತರದಿಂ ಸಂ ॥
ಗತಿಯಾಗ[3]ಲ್ಲೋಪಂ ವೇಣ್ಕೆ ।
ಚತುರ್ತ್ಥಿ ಸಮಾಸಲ್ಗ ವೆಂಬರದಱೊಳ್ ಕೆಲಬರ್ ॥ 411

ಪ್ರಯೋಗಂ ॥
ಕಂ ॥ ನಗೆಯೊಳಮಪ್ಪೊಡಮಿಂತೀ ।
ತೆಗಱ ದುರುಕ್ತಿಗಳನೆಮ್ಮೊಳಂ ನುಡಿಯಲ್ ನೀಂ ॥
ಬಗೆಯೊಳ್ ಪೇಱೊಂದನಣಂ ।
ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಪೇಱೇ ॥ 412

ಪರಾರ್ದ್ಧಕ್ಕೆ ॥
ಕಂ ॥ ತರವೇೞ್ ಮದವಾರಣಮಂ ।
ಬರವೇೞ್ ಸನ್ನದ್ಧವಾಜಿಸಾಧನಮಂ ಬಿ ॥
ತ್ತ[4]ರಿಸಲ್ಕೆ ವೇೞ್ ವರೂಥೋ ।
ತ್ಕರಮಂ ಬಲಿದೊಡ್ಡವೇೞ್ ಪದಾತಿಯನೀಗಳ್ ॥ 413

## ಸೂತ್ರಂ ॥ 95 ॥

ಎಸೆಗುಂ ಭಾವದೊಳ್[5]ಮರ್ದೇ ।
ಕಸಂಜ್ಞಾವಚನಂ ಕ್ರಿಯಾಸಮಭಿಹಾರಂ ವ ॥
ರ್ತ್ತಿಸುತಿರೆ ತಾನಕ್ಕುಂ ಸ ।
ರ್ವ್ವಸಾಧನೀಮಧ್ಯಮೈಕವಚನಮದೆಂದುಂ ॥ 414

ಪ್ರಯೋಗಂ ॥
ಭಾವಾರ್ತ್ಥಕ್ಕೆ ॥
ಕಂ ॥ ಸಿಡಿಲಂ ಪೊಸೆವುದು ಶೇಷನ ।
ಪೆಡೆಯೊಳ್ ಪಟ್ಟಿರ್ಪ್ಪುದೆಂಟುಮಾನೆಯ ಕೋಡಂ ॥
ಪಿ[6]ಡಿದೊತ್ತಿ ಕೀೞ್ವುದೇೞುಂ ।
ಕಡಲೊಳಗೋಲಾಡುತಿರ್ಪ್ಪುದವನ ವಿನೋದಂ ॥ 415

---

1 ತಡವರಿಸಿ. 2 ಮಡುವಿನೊಳಟಲಱಿಸಿ. 3 ಗಲುಲೋಪಂ. 4 ತ್ತರಿಸಬರ. 5 ಅವಜ್ಞೇ । ಅವಂಜ್ಞೆ.
6 ಪಿಡಿದುಱುಕೊಳ್ವು.

ಕ್ರಿಯಾಸಮಭಿಹಾರಕ್ಕೆ ॥

ಕಂ॥ ಕೊಳ್ಗೊಳ್ಳೆಂದೊಡನೊಡನೆಯೆ ।
ತುಳ್ಕುವ ಯುವತಿಯರ ಕರಪರಿಚ್ಯುತಸಲಿಲಂ ॥
ಗಳ್ಗಳೆ ಬಿಡೆ ಕೆದಱುವ [illegible]ಂ ।
ಜಳ್ಕದಿನಾದುದು ಸರೋವರಂ ಕಪಿಶಜಳಂ ॥ 416

## ಸೂತ್ರಂ ॥ 96 ॥

ಧಾತುಗನೇಕಾಕ್ಷರಕಾ ।
ಖ್ಯಾತವಿಭಕ್ತಿಗಳ ಮೊದಲೊಳಸು ತಾನಕ್ಕುಂ ॥
ಹೇತುಪ್ರಯೋಗದೊಳ್ ತ ।
ಜ್ಞಾತಿಯೆ ಕರ್ಣಾಟಧಾತುಗಳ್ಗಮು[1]ರ್ದಿರ್ಕ್ಕುಂ ॥ 417

ಪ್ರಯೋಗಂ ॥

ವೃ॥ ಎಸೆಗುಂ ಋಜ್ವಾಗತಂ ಕರ್ಣ್ಣ[2]ಸುಗುಮಳವಟ್ಟೂರ್ಧ್ವಮೃಜ್ವಾಗತಂ ಕೋ ।
ಭಿಸುಗುಂ ಪಾರ್ಶ್ವಾಗತಂ ನೋೞ್ಪರನೆಱಸುಗುಂ ಸಾಚಿ ತದ್ವಿದ್ವರಂ ರಂ ॥
ಜೆಸುಗುಂ ದ್ವ್ಯರ್ದ್ಧಾಕ್ಷಿಯೆಂಬಂತೆವೋಲಿರೆ ನೆ[3]ಗೞ್ದುರ್ದ್ದಗನಾಃಭಂಗಿಯಿಂ ಚಿ ।
ತ್ರಿಸಿ ಚಿತ್ರಕ್ಕಾಯುವೊಯ್ದಂ ಮದನನೆನೆ ಕರಂ ಕಾಂತೆ ಕರ್ಣ್ಣಪ್ಪಿ ತೋರ್ಕ್ಕು ॥ 418

ಇಲ್ಲಿ ಉಪಾಂತ್ಯಕ್ಕೆ ಲಘ್ವೇಕಾಕ್ಷರಕ್ಕಿದಂತಪ್ರಯೋಗಂ ॥

ಕಂ॥ ಸುರರೊಸೆಯೆ ಸ[4]ಕಳ ... ಮು ।
ಸುರನಿಕರಮತರ್ಕ್ಯಮಪ್ಪ ವಿಕ್ರಮಗುಣಮಂ ॥
ಧರಿಯಿಸಿ ಸಂದಿರ್ದ್ದಂ ಭಾ ।
ಸುರತೇಜನುದಾತ್ತಕೀರ್ತ್ತಿನಿಳಯಂ ಕೃಷ್ಣಂ ॥ 419

ಪ್ರಕೃತಿಗಳಂ ಧಾತ್ವರ್ತ್ಥದ ।
ವಿಕಲ್ಪದಿಂದಱಿದು ಸಮಱಿಕೊಳ್ವುದು ಬಹುರೂ ॥
ಪಕಮನ[5]ದಂ ಪೇೞಲ್ಕಾ ।
ಸಕಳಂ ವಾಕ್ಪತಿಯುಮಾಱನುಱದವರಳವೇ ॥ 420

ಪ್ರತಿಬುದ್ಧರಂ ಕುಱಿತ್ತೀ ।
ಸ್ಥಿತಿಯಿಂದಂ ಕಿಱಿದು ಮಾರ್ಗ್ಗಸೂಚನೆಗೆಯ್ದೆಂ ॥
ಮತಿವಂತರಱಿದು ಪೇೞ್ವುದು ।
ವಿತರ್ಕ್ಕದಿಂ ಮತ್ತಮುಕ್ತಶೇಷಮನಿದಱೊಳ್ ॥ 421

ಇದು ಶಬ್ದಸ್ಮೃತಿಯೊಳ್ ಆಱನೆಯ ಆಖ್ಯಾತಪ್ರಕರಣಂ ॥

---

1 ಮವಳ್ಳುಂ. 2 ವೃಶ್ಚಿಕ್ಷಮೆಂ, ವೃತ್ತಾರ್ಕ್ಷಮೆಂ. 3 ಬರೆದಿರ್ದ್ದಂ. 4 ಕಳಿಸಿಯೇಳೂಳಳಮು.
5 ನವೀಂಬಿಸಲ್ಕಾ.

ಗೀತಿಕೆ ॥ ಇಂತಿರೆ ಶಬ್ದಂ ಸಂದೇಹ ।
ಧ್ವಾಂತೌಘಂ ಪಿಂಗಿರೆ ಜಲಕನಾಗೆ ಬುಧ ॥
ಸಂತತಿಗಪ್ಪಂತು ಪೇಳ್ದಿನಿದಂ ।
ಶಾಂತಮನಂ ಕವಿತಾಗುಣೋದಯಂ ॥ 422

ವೃ ॥ ಅಭಿಮತಶಬ್ದಸಂಸ್ಮರಣದಿಂ ಜನಮುಂ ತಿಳಿವಂತು ಮಾಡಿ ವಾ ।
ಗ್ವಿಭವಮುದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯುಂತನೆಯ್ದೆ ತ ॥
ತ್ಸಭೆಗ[1]ಳೊಳಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ ।
ದಭಿನವಶರ್ವವರ್ಮ್ಮನಿವನೆಂದಪುದುರ್ವ್ವರೆ ನಾಗವರ್ಮ್ಮನಂ ॥ 423

ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯಮಾ
ನಾನೂನಕವಿತಾಗುಣೋದಯಂ ಶ್ರೀನಾಗವರ್ಮ್ಮ
ಪ್ರಣೀತಮಪ್ಪ ಕಾವ್ಯಾವಲೋಕನ
ದೊಳ್ ಶಬ್ದಸ್ಮೃತಿಯೆಂಬುದು
ಪ್ರಥಮಾಧಿಕರಣಂ ॥



---

1 ಗೊಳಗಗ್ರ.

## 2. ಕಾವ್ಯಫಲವ್ಯಾವೃತ್ತ್ಯಧಿಕರಣಂ.

### ಪದಪದಾರ್ಥ ಸಂಧಿದೋಷ ವಿನಿಶ್ಚಯ ಪ್ರಕರಣಂ.

ವೃ ॥ ಪ್ರತಿಭಾನಂ ಕಾವ್ಯವಿದ್ಯಾಪ್ರಚಯಪರಿಚಯಂ ವೃದ್ಧಸೇವಾನುರಾಗಂ ।
ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ ಪೇೞ್ವೊಡಂತಾ ॥
ಪ್ರತಿಭಾನಂ ಶಕ್ತಿ ಲೋಕಾಗಮಸಕಲಕಲಾವೇದನಂ ವಿದ್ಯ ಶಾಸ್ತ್ರ ।
ಸ್ವಿತನಪ್ಪಂ ವೃದ್ಧನಾಲಸ್ಯಮನುೞಿದಸಪುದ್ಯೋಗಮಭ್ಯಾಸಕರ್ಮಂ ॥ 424

ಕಂ॥ ಶ್ರುತವಾರಿನಿಧಿಯ ಪಾರಮ ।
ನತಿಪ್ರಬಂಧಾ[1]ಭಿಯೋಗರಾರೆಯ್ದಿದೊಡಂ ॥
ಕೃತಪುಣ್ಯಂಗಲ್ಲದೆ ವಿ ।
ಶ್ರುತಕವಿತಾರತ್ನಮಲ್ಲಿ ಸಂಭವಿಸುಗುಮೇ ॥ 425

ಮದಮಿಲ್ಲದಿಭಂ ಮಧುವಿ ।
ಲ್ಲದ ಕುಸುಮಂ ಚಂದ್ರನಿ[2]ಲ್ಲದಿರುಳೊಳಪ್ಪರ್ ॥
ಲ್ಲದ ನೃಪತಿ ಕವಿತೆಯಿಲ್ಲದ ।
ವಿದಗ್ಧತಾಗುಣಮದೇಂ ಮನಂಗೊಳಿಸುಗುಮೇ ॥ 426

ಪರಮಪ್ರೀತಿನಿಮಿತ್ತಂ ।
ನಿರತಿಶಯಯಶೋನಿ[3]ದಾನಮಪ್ಪುದಱಿನಿಹಂ ॥
ಪರಮೆಂಪರಡಕ್ಕರ್ಂ ಬಂ ।
ಧುರಕಾ[4]ವ್ಯನಿಬಂಧದಿಂ ಹಿತಂ ಪೆಱತುಂಟೇ ॥ 427

ಕೃತಿಸತಿಯ ಮೆಯ್ಯೊಳೆಳ್ಳನಿ ।
ತು ತಾನದೊಂದಱಿಯೆ ದೋಷವಾಗೆ ತದಾವ ॥
ರ್ಜ್ಜಿತಮಪ್ಪ ಕೀರ್ತಿಯುಂ ನಿಂ ।
ದಿತಮಕ್ಕುಂ ದರ್ಪಣಾರ್ಪಿತಚ್ಛಾಯೆಯವೋಲ್ ॥ 428

ಕಂ॥ ಅದಱಿಂದುಪೇಕ್ಷೆಗೆಯ್ಯದೆ ।
ಸದಭಿಮತೋದಾತ್ತಕೀರ್ತಿಯಂ ಬಯಸುವವಂ ॥
ಪದವಾಕ್ಯಾರ್ಥಂಗಳೊಳೊಂ ।
ದದಂತು ಪಿಂಗಿಸುಗೆ ದೋಷಮಂ ಕೃ[5]ತಿಯಿಂದಂ॥ 429

---

1 ಧಾನಂಗಾಗ. 2 ಇಲ್ಲದೊಂದಿರುಳಪ್ಪುರ್. 3 ವಿಧಾನ. 4 ವಾಕ್ಯ. 5 ಕ್ರಮದಿಂದಂ.

ಪ್ರ[1]ಯೋಜನಸ್ಥಾಪನಂ॥

ಸೂತ್ರಂ ॥ 97 ॥

ಇರೆ ಶಬ್ದಾರ್ಥಂಗಳ್ ತ ।
ತ್ಪರತೆಯಿನದು ಕಾವ್ಯಮದಱೊಳಱಚಿತ್ರೈಕಾರ್ಥಂ ॥
ತರವಾಚಿ ಶಬ್ದಮು[2]ವಭಾ ।
ಸರೂಪವಮಾಹ್ಲಾದಕಾರಿಯಪ್ಪುದದರ್ಥಂ ॥ 430

ಸೂತ್ರಂ ॥ 98 ॥

ಪ್ರಕರಣದಿಂ ಶಬ್ದಾಂತರ ।
ದ ಕೂಟದಿಂದಭಿನಯಂಗಳಿಂದಿಷ್ಟಾರ್ಥ ॥
ಪ್ರಕಟನಮುಕ್ಕುಮನೇಕ ।
ಪ್ರಕಾರಮರ್ಥಂ ಪದಕ್ಕೆ ಸಂಭವಿನುವೊಡಂ ॥ 431

ಉದಾಹರಣೆ ॥

ಪ್ರಕರಣಕ್ಕೆ ॥

ಕಂ ॥ ಏನೇನುಂ ಮದನುಜರೆನ ।
ಗಾನತರಣಮಾಗದಿರ್ದರುಂ ಮದಮವರ್ಗಂ ॥
ತೇನೇತಱೊಳಾಯ್ತುದನಿನಿ ।
ಸಾನುಂ ಪೇಗದೊಳೆ ಕಳೆದು ತೋಱಿನೆ ರಣದೊಳ್ ॥ 432

ಶಬ್ದಾಂತರಸಂಸರ್ಗಕ್ಕೆ ॥

ಕಂ ॥ ಹರಿ ಪೊಯ್ಯೆ ಬಿರಿದ ಮದವ ।
ತ್ಕರಿಕುಂಭದಿನಗದೊಳೊಕ್ಕ ರಕ್ತಾರಕ್ತ ॥
ಸ್ಫುರಿತನವಮೌಕ್ತಿಕಂಗಳ ।
ನರೆಉಱಿ ವನಚರಯುರೆರದ ಪಣ್ಗೆತ್ತಿಯ್ದರಿ ॥ 433

ಅಭಿನಯಕ್ಕೆ ॥

ಕಂ ॥ ಇನಿವಿರಿಯವಪ್ಪ ಮೊಲೆಯುವ ।
ಳಿನಿವಿರಿಯವೆನಿಪ್ಪ ಕಣ್ಗಳಾಕೆ ಮನಂಗೆ ॥
ಟ್ಟನಿತು ದೆವಸಂಗಳಂ ತ ।
ನ್ನಿನಿಱುನನಗಲ್ದಿಂ ಬೞಿಕ್ಕಮಿಂತಿಂತಾದಳ್ ॥ 434

1 ಪ್ರಯೋಗಸ್ಥಾಪನಂ. 2 ಮದಭಾ.

## ಸೂತ್ರಂ ‖ 99 ‖

ಅಸಮರ್ತ್ಥಮಪ್ರತೀತಂ ।
ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀ ‖
ರಸಮೆಂದು ದೋಷಮಿವು ಸಮ ।
ನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ ‖ 435

## ಸೂತ್ರಂ ‖ 100 ‖

ತೆಱೆದಿರೆ ತದ್ವಾಚಕತೆಯು ।
ನಱಿಪಲ್ ನೆಱೆಯದುದೆ ಕೃತಿಯೊಳಸಮರ್ತ್ಥಪದಂ ‖
ಪೆಱತೇಂ ಪ್ರತೀತಿ ಬಗೆಗೇ ।
ತಱೊಳಂ ಶೋಭಿದುದದಪ್ರತೀತಂ ಗೂಢಂ ‖ 436

ಉದಾಹರಣೆ ‖

ಅಸಮರ್ತ್ಥಕ್ಕೆ ‖

ಕಂ ‖ ಉರಗಾ[1]ಳಿ ನಂದನಾವಳಿ ।
ತರತರದಿಂದೆಱಗಿ ಜಳಭೃದಂತಿಕದೊಳ್ ಮಾ ‖
ಣ್ದಿರದೆ ಕುಡಿದುಪ್ಪುನೀರಂ ।
ಧರೆಗಿನಿದಂ ಕಱೆವುದಿಂತಿದೇಂ ವಿಸ್ಮಯಮೋ ‖ 437

ಅಪ್ರತೀತಕ್ಕೆ ‖

ಕಂ ‖ ಅಸಿತ[2]ರ್ದ್ಧ ವಯಸ್ಯಾಧ್ಯದೊ ।
ಳೆಸೆವ ನವಾಬ್ಜಜನ್ಮಶೋಭೆ ಮೇಚಕರೂಪ್ಯ ‖
ಪ್ರಸರದ ಮೆಯ್ಯೊಳ್ ಪ[3]ರ್ವ್ವರೆ ।
ಪಸರಿಸಿದ ಗುಣಂಗಳ[4]ವನನೇನಿಱಿಸಿದುವೋ ‖ 438

## ಸೂತ್ರಂ ‖ 101 ‖

ಅವಿ[5]ಹಿತಸಂಹಿತೆ ಮೇಣ್ ಸಂ ।
ಧಿವಿರೂಪಂ ಬಗೆಯೆ ತಾಂ ವಿಸಂಧಿಯೆನಿಕ್ಕುಂ ‖
ಸ್ವವಿಕ[6]ಲ್ಪಿತದೊಳನಿಷ್ಟಾ ।
ರ್ತ್ಥವಾಗೆ ವಿಪರೀತಕಲ್ಪನಂ ತಾನಕ್ಕುಂ ‖ 439

---

1 ಗಾಧಿ, ಗಾಡಿ. 2 ಶತ್ರು. 3 ಪಕ್ಷರಂ. 4 ಳಳವನೇ. 5 ಏಹಿಕ. 6 ಕಲ್ಪನ.

ಉದಾಹರಣೆ ॥

ವಿಸಂಧಿಗೆ ॥

ಕಂ ॥ ಅಸಿಯು ಬಱಿ ಕಸದ ಪ[1]ಟ್ಟಗ ।
ಮಿಸುಗುವ ಆರಂ ತೊಳಪ್ಪ ಕನ್ನವುರಂ ಚೆ ॥
ಲ್ವೆಸೆದಿರೆ ಬಲವಪ್ಪರ್ ವಿಟರ್ ।
ಕುಸುಮೇಷುವ ಮೇಳದವರ್ಗಳೆನಿಸಿದರ[2]ದಱೊಳ್ ॥ 440

ವಿರೂಪಸಂಧಿಗೆ ॥

ಕಂ ॥ ಪ[3]ಸುರಂ ಬಿಡದೆಸಪ ಮಳೀ ।
ಮುಸರ್ಗಂದುದಿತೋಡುರಾಜನಂ ನಯದಿಂ ಕ ॥
ಲ್ಪಿಸಿ ಜಲಧಿ ನುಡಿವ ಮಾಱ್ಕೆಯಿ ।
ನೆಸೆದತ್ತು ಲ್ಲೋಲಬಹಲಕಲ್ಲೋಲರವಂ ॥ 441

ವಿಪರೀತಕಲ್ಪನಕ್ಕೆ ॥

ಕಂ ॥ ಬಳವದರಿಭೂಪದಾವಾ ।
ನಳಃ ಕಳಿಂಗಾಧಿರಾಜ ನಿನ್ನುಗ್ರಶರಾ ॥
ವಳಿವಿಳಸಿತೋರುಧಾರಾ ।
ಜಳಸ[4]ಕರನಿಂದವೆಯ್ದೆ ಮುಱುಗಿ ಧಾ[5]ರದೊಳ್ ॥ 442

ಸೂತ್ರಂ ॥ 102 ॥

ಶ್ರುತಿವಿರಸಪದಕ್ಷೇಪ ।
ಸ್ಥಿತಿ ಕಷ್ಟಂ ಗ್ರಾಮ್ಯಶಬ್ದಸಂದರ್ಭಸಮು ॥
ಸ್ಥಿತಮುಮಸಭ್ಯಾರ್ತ್ಥಕೃತಿ ।
ಸ್ಮೃತಿಯುಂ ನೀರಸಮೆನಿಪ್ಪುದಕ್ಕುಂ ದೋಷಂ ॥ 443

ಉದಾಹರಣೆ ॥

ಕಷ್ಟಕ್ಕೆ ॥

ಕಂ ॥ ಇದಿರ್ವರ್ಪ್ಪರ್ವೊಲಾಯ್ತು ಪವನ ।
ವಿದಳತ್ತ[6]ವ್ಯಾರ್ದ್ರ್ಯಪೋಢಪುಷ್ಪರಜಸ್ಸ ॥
ಕ್ತ ದಿನೊದವಿ ಮಾರುತಂ ಭ್ರಾ ।
ಮ್ಯದತ್ಯುದಗ್ರಾನಿರ್ಝಂಕೃತೋಜ್ಜೈಸ್ತರ್ದ್ಧ್ಯಾನಂ ॥ 444

ನೀರಸಕ್ಕೆ ॥

ಕಂ ॥ ಅಂಗನೆಯೊಳ್ ಕಳ್ದಿರ್ಪ್ಪುದ ।
ನಂಗಾಹಿಯನಱಿದು ಪೇ[7]ೞ್ದು ಪೊಡೆಯುಂ ಕಡುಪಿ ॥
ನ್ನಂಗಂ ದೊರೆಕೊಂಡಿರೆ ಕೊಂ ।
ಡಂ ಗಡಮೆಲೆ ತೈ[8]ಗ ಪುಲಿಲದೇಂ ಚೋಜಿಗಮೋ ॥ 445

1 ಪಟ್ಟಗೆ, ಕಟ್ಟಗೆ. 2 ದವರೊಳ್. 3 ಪಸರಂ ಬುಡದೆಸಗುವ ನುಡು । ಳಸಗ್ಗ. 4 ಸೀಕರದಿಂಗ. 5 ಧರೆಯೊಳ್. 6 ತ್ಸತ್ಸವ್ಯಾರ್ದ್ರ್ಯಪೋಢ. 7 ಪೊದ್ದುರ್ಪೊಡೆಯುಂಕುಱುಪಿ. 8 ತೈಗುಹುಱುದೇಂ

ತಲೆಮಟ್ಟು ಪಾ[1]ಯ್ದು ಪೀ[2]ಯರ್ಯ್ಗ ।
ವಲೇಪದಿಂದಿೞಿದು ಬೞ್ದುಮೞ್ದಂ ಪಾತ್ರಂ ॥
ಚಲಚ[3]ಲದಿಂದೊಡನಿಕ್ಕಿದ ।
ಸೊಲೆದದಿರೊಳ್ ಮಣಿಸಾದಾಂತ ಪರವಾಹಿನಿಯಂ ॥ 446

## ಸೂತ್ರಂ ॥ 103 ॥

ಮಱಸುಂದು ಸೂಱಸುಂದೆನೆ ।
ಪಿಱಿತಿನಿಯೆನೆ ಪೂಱಿಯೆನೆ ಪದಾಂತರದಿಂದಂ ।
ನೆಱೆದು ನಿಲೆ ದು[4]ಷ್ಪ್ರತೀತಿಯ ।
ನಱಿಪುವ ಪೆಱಪೆಱವುಮಿನ್ನವೇ ಗ್ರಾಮ್ಯಂಗಳ್ ॥ 447

ಅದೆಂತೆನೆ ॥

ಕಂ ॥ ನೆಱೆಗೊಂಡು ತೊನೆವ ಸರಲಿಂ ।
ನೆಱಲ್ದು ರಥದೊಳಗೆ ಬೞ್ದು ಚಕ್ರಧರಂ ಮೆ ॥
ಯ್ಮಱೆದು ಗುಹಾಂತರದೊಳ್ ಪಿಗೆ ।
ಮಱಸುಂದಿದ ಪುಲಿಯನಾಗಳನಿಸಂ ಪೋಲ್ತಂ ॥ 448

ಮಚ್ಚರದ ಸೂಱಸುಂ[5]ದಿನ ।
ಪೊಚ್ಚಱನಾಂ[6]ತಿರ್ದ್ದ ಬಿರುದಿನೆಸಕದ ಪೆಱವುಂ ॥
ಕ[7]ಚ್ಚ ಕಳಿಗಳ ತೊಡರ್ಪ್ಪಿನ ।
ಮೆಚ್ಚವಣಿಗೆಯುಂಕವುಂ ಮಹೀಶಂ ನೋೞ್ಕಂ ॥ 449

ಕೊಱೆವಲ್ ಬ[8]ತ್ತಿದ ಕಾಲ್ ಪಿಂ[9] ।
ಪಱಿಗೇಸಂ ನೆಕ್ಕಕದವು ಪೊಕ್ಕಿರ್ದ್ದ ಬಸಿರ್ ॥
ತೆಱೆದ ಮುಖಕುಹರವ[10]ಬ್ಬಿಸೆ ।
ಪಿಱಿತಿನಿಗಳಬಳಗವೊಯ್ದು ತಂ[11]ದುದು ಮುನಿಯಂ ॥ 450

ವೃ ॥ ಮ[12]ತ್ತರುಡಂಗೆಗೊಂಡು ಬಡಿಮಲ್ ಚಲದಿಂದೆನಸುಂ ದುರಾಗ್ರಹಂ ।
ಚಿತ್ತದೊಳಾಗೆ ನಿನ್ನ ಬೞಿಯಂ ಬರಲೀಮುಸೇಂ[13]ಟವಗಾಳದಿಂ ॥
ಸುತ್ತುವರ್ಗಲ್ಲದೊಲ್ಲೆ ಬಿಡು ನೀನೆನಗಿಲ್ಲಳ ಪೂಱಿ ತೋ[14]ಱಿ ಪೇ ।
ೞ್ತಿರಲಾಸೆಯುಂ ಬಿಸುಟು ನೀಂ ಕ[15]ಳೆ ಪಾಂಟಮತಕ್ಕೆ ಸ್ವೈರಿಸೆಂ ॥ 451

ಇಂತೀಪೇೞ್ದವುಮನಱಿದು ಪೆಱಪೆಱವು ಮನಱಿದುಕೊಳ್ವುದು ॥

ಕಂ ॥ ಅನುಕರಣದೊ[16]ಳೊಂದಿದ ವಾ ।
ತಿನಲ್ಲಿ ನಿರ್ದ್ದೋಷವಾಗೆ ಸಲ್ಗುಂ ಪೇೞ್ದಂ ॥
ತಿನಿತುಂ ಸ್ವರೂಪಕಥನದೊ ।
ಳನುವಾದಂ ಭಿನ್ನಶಬ್ದಮುಪ್ಪುದಱಿಂದಂ ॥ 452

ಇದು ಕಾವ್ಯಮಲವ್ಯಾವೃತ್ತಿಯೊಳ್ ಪದಪದಾರ್ತ್ಥಸಂಧಿದೋಷ
ವಿನಿಶ್ಚಯಪ್ರಕರಣಂ ಪ್ರಥಮಂ ॥

---

1 ಪೊಯ್ದು. 2 ನಿಯ್ಯಾರ್ । ಸ. 3 ಚಲದಿಂ. 4 ದುಃಪ್ರತೀತಿ. 5 ಸುಂದಿನ. 6 [illegible] 7 [illegible] 8 [illegible]
9 ಪಿಂಪಱಿ. 10 ಮುಬ್ಬಿಸೆ. 11 ಬಂದವು. 12 ಮತ್ತರು. 13 ಸಿಂತ. 14 ತೋಱಿಱಿ. 15 ಕಲು. 16 ದಿನಂ.

## ಕಾವ್ಯವಾಕ್ಯಾರ್ತ್ಥದೋಷಾನುಕೀರ್ತ್ತನಪ್ರಕರಣಂ.

### ಸೂತ್ರಂ ॥ 104 ॥

ವಿದಿತಾರ್ತ್ಥಂ ಕ್ಷೋದಕ್ಷಮ ।
ಮುದಾತ್ತಶಬ್ದಂ ಪರಸ್ಪರಂ ಸಾಪೇಕ್ಷಂ ॥
ಪದಸಮುದಾಯಂ ವಾಕ್ಯಂ ।
ವ್ಯಪಸ್ತಕಾಂಕ್ಷಂ ತದೇಕವಸ್ತುನಿಬದ್ಧಂ ॥ 453

ಲಕ್ಷ್ಯಂ ॥
ಅಸವಸದಿಂ ಪೞಿಗೆಯ್ಯಂ ।
ಕಸವಂ ನೋದಿಸದೆ ಬಿತ್ತಿದೊಕ್ಕಲಿಗನವೋಲ್ ॥
ಸಸಿಯಂ ನೋಡ ತಳೋದರಿ ।
ಪಸುಸುಯ್ಯಂ ಬಯ್ಯಮಂ[1]ತೆ ಮಾಡಿದ ಬಿದಿಯಂ ॥ 454

### ಸೂತ್ರಂ ॥ 105 ॥

ವ್ಯವಹಿತಮೇಕಾರ್ತ್ಥಂ ವ್ಯ ।
ರ್ತ್ಥವಪಕ್ರಮಮಖಿಳಲೋಕಶಾಸ್ತ್ರವಿರುದ್ಧಂ ॥
ಸುವಿದಿತಯತಿಭಂಗಂ ಭಿ ।
ನ್ನವೃ[2]ತ್ತಮೆಂದಿಂತು ವಾಕ್ಯದೋಷಮಿವಕ್ಕುಂ ॥ 455

### ಸೂತ್ರಂ ॥ 106 ॥

ವ್ಯತಿಕೀರ್ಣ್ಣಪದಕ್ರಮಮನು ।
ಚಿತಾನ್ವಯಂ ವ್ಯವಹಿತಾನ್ವಯಂ ತಾನದು ದಲ್ ॥
ಮತಿಸಮ್ಮೋಹಮನಿದಿರವ ।
ರ್ಗೆ ತೊಡಚುರ್ಲ್ವೇೞ್ದುಡಲ್ಲಿಗ[3]ಲ್ಲದು ದೋಷಂ ॥ 456

ಅ[4]ವರ್ಕ್ಕೆ ಲಕ್ಷ್ಯಂ ॥
ಕಂ ॥ ಬಳಕೊಳ್ ಮುಂ ಸಿನಗಿಲ್ಲದ ।
ಮುಳಿಸಂ ಕಾಲ್ಗೆಱಗಿದೋಪನಂ ತೊಱೆ ದಯೆಯಿಂ ॥
ತಳಮ[5]ಳಗುತ್ತನುನಯದಿಂ ।
ತಿಳಿಪಲ್ಕೆಂದೆಱಗದನ್ನಮೆನ್ನರುಮುೞಗುಂ ॥ 457
ಪತ್ರಂ ಭುಜಂಗಸಮಿತಿ ಕ ।
ಳತ್ರಂ ದಳ್ಳುರಿ ವಿಭೂಷಣಾವಳಿ ಭೂಭೃ ॥
ತ್ಪುತ್ರಿ ಗವಾಧಿಪನಜಿನಂ ।
ನೇತ್ರಂ ನಿವಸನವೆನಿಪ್ಪನೊಸೆಗೆಮಗಭವಂ ॥ 458

---

1 ಮಿಂತು. 2 ವೃತ್ತಿಸೆಂ. 3 ಗಲ್ಲಂ. 4 ಅದರ್ಕ್ಕೆ. 5 ಮಳುಳು.

## ಸೂತ್ರಂ ॥ 107 ॥

ಅವಧಾರಿಸದುಕ್ತಾರ್ಥವು ।
ನವಿಶೇಷದೆ ಮಗುಳ್ದುಸು[1]ಡಿದೊಡೇಕಾರ್ಥಂ ಕ್ರೋ ।
ಧ ವಿಷಾದಖೇದಭಯಹ ।
ರ್ಷವಿಸ್ಮಯಾದಿಗಳೊಳನ್ನವಿಷ್ಟಮದುಷ್ಟಂ ॥ 459

ಪ್ರಯೋಗಂ ॥

ಪೂರ್ವಾರ್ಧಕ್ಕೆ ॥

ಕಂ ॥ ಉನ್ಮನವೆ ಮಾಳ್ಕುಮುತ್ಕೆಯು ।
ನುನ್ಮದಬರ್ಹಿಣಶಿಖಂಡಿಕೇಕಾವಿರುತಂ ॥
ತನ್ಮಧುರಧ್ವನಿಯುಂ ಜಳ ।
ಧೃನ್ಮೇಘನಿನಾದಮೊದವೆ ದೆ[2]ಸೆದೆಸೆಗೆಸೆಗುಂ ॥ 460

ಅಪರಾರ್ಧಕ್ಕೆ ॥

ವೃ ॥ ಗಗನಾಧ್ವರ್ ಶರಣಾಗಿಮಾಗಿಮಮರರ್ ನಿಂದಾ[3]ನಿಮಾನಿಂ ದಿಶಾ ।
ನಗಭೀಕರ್ ನೆರೆದೊಡ್ಡಿಮೊಡ್ಡಿಮುರಗರ್ ಬಂದೆಯ್ದಿಮೆಯ್ದಿಂ ಮನ ॥
ಸ್ವಿಗಳೀದೈತ್ಯನನಿಕ್ಕಿಮಿಕ್ಕಿಮದಟರ್ ಪೂಣ್ಬಣ್ಮಿಮಣ್ಮಿಂ ಯಶೋ ।
ರ್ಥಿಗಳೆನ್ನಂ ನೆಲೆಗುಯ್ಯಿಮುಯ್ಯಿಮನುತುಂ ತನ್ವಂಗಿ ಪುಸ್ಯಲ್ಗಿದಳ್ ॥ 461

## ಸೂತ್ರಂ ॥ 108 ॥

ಕರಿಕಳಭಮೆನೆ ಶಿರಶ್ಶೇ ।
ಖರಮೆನೆ ನವಪುಷ್ಪಮಾಲೆಯೆನೆ ಮೌಕ್ತಿಕಭಾ[4] ॥
ಸುರಹಾರಯಷ್ಟಿಯೆನೆ ಪಾ ।
ನರುಕ್ತ್ಯಮಾಗದು ವಿಶೇಷಸಂಭಾವನೆಯೊಳ್ ॥ 462

ಪ್ರಯೋಗಂ ॥

ಕಂ ॥ ಆರಾಜಶಿರಶ್ಶೇಖರ ।
ನಾರಿಂದಂ ಪಿರಿಯನಳವಿಯೊಳ್ ಬಳವದಹಂ ॥
ಕಾರದೆ ಬ[5]ರೆ ತಗೆವಂ ಸ್ತಂ ।
ಬೇರಮಕಳಭಮನು[6]ಪಾತ್ತನಾಲಧಿಮೂಲಂ ॥ 463

ನವಕುಸುಮಮಾಲೆ ಮೌಕ್ತಿಕ ।
ವಿವಿಕ್ತಹಾರಾನುಕಾರ ಕ[7]ರಮೊಪ್ಪಿಕ್ಕುಂ ॥
ಸವಿಲಾಸದಸ್ಯುವನಿತಾ ।
ನಿವಹಘನಸ್ತನತಟಾಂತರವ್ಯಾಲಗ್ನಂ ॥ 464

1 ವಿಡುವುದೇ, ಬಿಡುವುದೇ. 2 ದಶದಿಶೆ. 3 ದಾಗಿಮಾಗಿಂ. 4 ಬಂಧುರ. 5 ನಿಲೆತೆಗಸಂ. 6 ನುಂದಾತ್ತ. 7 ಕಳ.

## ಸೂತ್ರಂ || 109 ||

ವ್ಯರ್ಥಂ ಪೂರ್ವಾಪರವಿಹಿ |
ತಾ[1]ರ್ತ್ಥವ್ಯಾಘಾತದಿಂ ವಿರುದ್ಧಾರ್ತ್ಥಪದಂ ||
ಸಾ[2]ರ್ತ್ಥಕಮುಕ್ತಮನರ್ತ್ಥಕ |
ದರ್ತ್ಥಿತಜನದುಕ್ತಿವಿಷಯದೊಳ್ ಮತ್ತದುವುಂ || 465

ಆಯೆರಡಱ್ಕಂ ಲಕ್ಷ್ಯಂ ||

ಕಂ || ಎಱಗಿಸು ಭುಜವಿಜಯದಿನಱ |
ಮಱೆದೆ ಜಿಗುರ್ತ್ತಿರ್ಪ್ಪರಾತಿನೃಪರಂ ಧ[3]ರ್ಮ್ಮರ್ ||
ಕ್ಕೆಱವಟ್ಟುಗಿರ್ದ್ದಯೆ ನೀಂ |
ಪೆಱರಾರುಂ ನಿನಗೆ ಪಗೆವರೇಂ ಬರುವೊಳರೇ || 466

ಪರದಾರಗಮನಮಾ[4]ಯಾ |
ಚರಿತಂಗೆ[5]ನಗೇಂತು ಯುಕ್ತಮುಕ್ತಂ ತತ್ವಂ ||
ದರರುಚಿರಮಧುರವ[6]ನಿತಃ |
ಧರಪಾನಂ ತಾನದೆಂತು ಪೇೞ್ ಕೂ[7]ಡುಗುಮೋ || 467

## ಸೂತ್ರಂ || 110 ||

ಮೊದಲೊಳ್ ಮುಂ ಪೇೞ್ದ್ದೇ |
ಶದಂದಮನುದೇಶಮಾಗದಂದಕ್ರಮಮಿ ||
ನ್ನದುವುಂ ಸಂಬಂಧಕ್ಕಾ |
ಪ್ರದಾನುಮನುಬೋಧಹೇತುವಾದೊಡದೋಷಂ || 468

ಉದಾಹರಣೆ ||

ವೃ || ಸತ್ವರಜಸ್ತಮೋಗುಣವಿಭಾಗದಿನೀತ್ರಿಜಗಕ್ಕೆ ತಾನೆ ಕ |
ರ್ತ್ತೃತ್ವದೊಳೊಂದಿಯುಂ ನೆ[8]ಱೆಯೆ ಸಂಹರಿಸಲ್ ನೆ[9]ಱೆದುಂ ಸಮಂತು ನಿ ||
ತ್ಯತ್ವಮನಾಂತುವಿಶ್ವಸನಜನಚ್ಯುತನೆಂಬಿನೆಗಂ ವಿಭಿನ್ನಮೂ |
ರ್ತ್ತಿತ್ವಮನಪ್ಪುಕೆಯ್ದ ಪರಮೇಶ್ವರನೀಗೆಮಗಾಪ್ತತತ್ವಮಂ || 469

ಕಂ || ವಾತಂ ಪಿತ್ತಂ ಕಫಮೆಂ |
ಬೀತೆಱದಿಂ ಮೂಱು ದೋಷಮಾದ್ಯಂತಸಮಾ ||
ಖ್ಯಾತಂಗಳವುಷ್ಣದಿನತಿ |
ಶೀತದಿನುಪಶಮಿಕುಮಲ್ಲಿ ಮಧ್ಯಮದೊಂದುಂ || 470

## ಸೂತ್ರಂ || 111 ||

ಕಾಳಸ್ವಭಾವದೇಶಸ |
ಮಾಳಕ್ಷಿತವಸ್ತುರೂಪವಿಪರೀತಮದಂ[10] ||
ತಾಳೆ ಲೋಕವಿರುದ್ಧಂ ಗುಣ |
ದೊ[11]ಳಗೆ ಮದಿಕ್ಕುರ್ವರಮೆ ಕವಿಕೌಶಲದಿಂ || 471

---

1 ತಾತ್ಪರ್ಯಂ. 2 ಸ್ವಾರ್ತ್ಥಕ. 3 ಧರ್ಮ್ಮರ್. 4 ಮಾಯ್ಯಾರ್. 5 ನಿನಗೆಂತು. 6 ವೃತಾ. 7 ಮಾ. 8 ಬೆಱೆಯೆ. 9 ಮೆಱೆದುಂ. 10 ದಿಂನಾ. 11 ಲಾಲಸದೊಳ್ ವಿಮಗಿದಕ್ಕು ಕವಿಕೌಶಲದಿಂ.

ಅನಿತರ್ಕ್ಕಂ ಲಕ್ಷ್ಯಂ ॥

ವೃ ॥ ವಿಕಚಾಂಭೋರುಹಷಂಡಮುನ್ಮದಮರಾಳಾನೀಕಮುತ್ಫುಲ್ಲಚಂ ।
ಪಕಮಾಕಂಪಮಹೀಜಮುಜ್ಜ್ವಳವಿಮುದ್ರಾಂಗಂ ಸ್ಫುಟತ್ಕೋಕಿಲ ॥
ಪ್ರಕಟಾರಾವಪರಂಪರಾಪರಿಗತಾಶೋಕಾಂಜಮಕ್ಷೀಬಕೇ ।
ಕದಂಬಂ ಜಗತೀಜನಕ್ಕೆ ಪಡೆದತ್ತಭ್ಯಾಗಮಂ ರಾಗಮಂ ॥ 472

ಇದು ಕಾಲವಿರುದ್ಧಂ ॥

ಕಂ ॥ ಕೋಡುಳ್ಳ ತುರಂಗಂ ಬಂ ।
ಡಾ[1]ಡುವ ನವಕರ್ಣ್ಣಿಕಾರಮತಿಮಧುರತೆಯೊಳ್ ॥
ಕೂಡಿದ ನಿಂಬಾರಾಮಂ ।
ನಾಡೊಳಗೊಳವೆಂದೊಡಿನ್ನದೇವರ್ಣ್ಣಿಪುದೋ ॥ 473

ಇದು ಸ್ವಭಾವವಿರುದ್ಧಂ ॥

ಅ ॥ ಕರ್ಪ್ಪೂರಭೂರುಹಾರಾಮೋ ।
ತ್ಸರ್ಪ್ಪದ್ಧೂಳೀ [ವಿ]ಧೂಸರಂ ॥
ತೋರ್ಪ್ಪುದಾತಿಥ್ಯಮಂ ಮಾಡಲ್ ।
ಬರ್ಪ್ಪಂತೀ ಮಲಯಾನಿಲಂ ॥ 474

ಇದು ದೇಶವಿರುದ್ಧಂ ॥

ಕಂ ॥ ಜೇಱೊಂದದ್ಭುತರಸಮಂ ।
ಬೀಱುತ್ತುಮನೇಕವಿವಿಧಫಲಪರಿಣತಿಯಿಂ ॥
ದಾಱಿಂ ಋತುಗಳುಮೊಡನೆಯೆ ।
ತೋಱಿದುವು ತಪಃಪ್ರಭಾವದಿಂ ಮು[2]ನಿಪತಿಯಾ ॥ 475

ಇದು ಕವಿಕೌಶಲಂ ॥

## ಸೂತ್ರಂ ॥ 112 ॥

ನ್ಯಾಯಾಗಮನೃಪವಿದ್ಯಾ ।
ವ್ಯಾಯಕಲಾಕಾಮತಂತ್ರವಿಷಯವಿರೋಧ ॥
ಪ್ರಾಯಂ ಶಾಸ್ತ್ರವಿರುದ್ಧಂ ।
ಶ್ರೇಯಮದಂತೆಲ್ಲಿಯಾನುಮುಕ್ತಿಕ್ರಮದಿಂ ॥ 476

ಉದಾಹರಣೆ ॥

ಕಂ ॥ ಅವಿನಶ್ವರಗತಿ ಸಂ[3]ಸ್ಥಾ ।
ರವೆಂಬ ಸು[4]ಗತೋಕ್ತಿ ಸತ್ಯಮಂತಲ್ಲದೊಡಾ ॥
ನವನೀಲನೀರಜಾಕ್ಷಿಯ ।
ಸವಿಲಾಸಾಲೋಕಮಿನ್ನುಮಿರ್ಕ್ಕುಮೆ ಮನದೊಳ್ ॥ 477

1 ತೋಱದ, 2 ಕನ್ಯನಿಯಾ, 3 ಸಂಸಾರ, 4 ಸಂಗತೋಕ್ತಿ.

ಕಂ ॥ ಉಪನಯನಂಗೆಯ್ವುದೆಯುಂ ।
ಸ್ವಪೂರ್ವ್ವವಾಸನೆಯ ಬಲದಿನಿಂತೀತಂ ವೇ ॥
ದಪುರಾಣವೇದಿಯಾದಂ ।
ವ್ಯಪೇಕ್ಷೆಗೆಯ್ಗುಮೆ ವಿಶುದ್ಧಮಣಿ ಸಂ[1]ಸೃತಿಯುಂ ॥ 478

ಉೞಿದುವಕ್ಕರ್ಮಿಾತೆಱದಿನಱಿದುಕೊಳ್ವುದು ॥

ಸೂತ್ರಂ ॥ 113 ॥

ನಿ[2]ಯತಸ್ಥಾನಂ ಪದವಿಸೃ ।
ತಿಯೊಳಾದ ವಿರಾಮಮಮಱಿಗೆ ಯತಿಯಕ್ಕುಮದ ॥
ಕ್ಕರ್[3]ಯ ಥಾಗತಿ ಯತಿಭಂಗಂ ।
ಪ್ರಯುಕ್ತಸಮಭರವಿಭಾಗದೊಳ್ ನಿ[4]ರ್ದ್ದೋಷಂ ॥ 479

ಪ್ರಯೋಗಂ ॥

ಕಂ ॥ ಅತಿಮೃದುವನಿೞಿಸುಗುಂ ಮ ।
ತ್ತತಿತೀವ್ರನನಣಮೆ ಜನಮದೆಳಸದದೆಂತುಂ ॥
ಮತಿವಂತನಂ[5]ತಱಿಂದೀ ।
ಕ್ಷಿತಿಯುಂ ಬ[6]ಸದಾಗಿ ಮಾೞ್ಕೆ ಮಧ್ಯಮಗತಿಯಿಂ ॥ 480

ವೃ ॥ ಇಂತೀಪೇೞ್ದಾ ನೃಪಗುಣವಿಭೇದಂಗಳಂ ತಾಳ್ದಿ ನಿಂದಾ ।
ತಂ ತನ್ನೊಳ್ ತಾಳ್ದುಗುಮಖಿಳಲೋಕೈಕಸಾಮ್ರಾಜ್ಯಮಂ ವಿ ॥
ಭ್ರಾಂತೇಂ ಭೂಮ್ಯಂ[7]ತರರಿಪುಗಳಂ ಗೆಲ್ದು ವಿಶ್ರಾಂತದಿಂ ಕ ।
ಲ್ಪಾಂತಸ್ಥಾಯಿಪ್ರಕಟವಿಹಟತ್ಕೀರ್ತ್ತಿಗಂ ಕಾಂತನಕ್ಕುಂ ॥ 481

ಸೂತ್ರಂ ॥ 114 ॥

ಗುರುಲಘುರಚನೆಗೆ ನಿರ್ದ್ದಿ ।
ಷ್ಟರೂಪಹೀನಾಧಿಕಾಕ್ಷರಂ ಛಂದದೊಳುಂ ॥
ದಿರೆ ಭಿನ್ನವೃತ್ತಮೆಂಬುದು ।
ದುರುಕ್ತಮತ್ಯಂತದೋಷಮಕ್ಕುಂ ಕೃತಿಯೊಳ್ ॥ 482

ಲಕ್ಷ್ಯಂ ॥

ಕಂ ॥ ಜೀಮೂತಕೇತುಗಣ್ಣಂ ।
ಗೆ ಮೇಘವಾಹನನದೆಂತು ಮುಂ ಬೆಸಕೆಯ್ವಂ ॥
ನಿಮ್ಮಣ್ಣಂಗೆ ಮತಂಗಂ ।
ಗಾಮುಱಿಕ್ಕೆಯೆ ವಿನಯದಿಂದೆ ನೀಂ ಬೆಸಕೆಯ್ಯಂ ॥ 483

1 ಸತ್ಕ್ರಿಯೆ. 2 ನಿಯಮ. 3 ಕ್ಕರ್ಯಥಾರ್ತ್ಥಗತಿಯಭಂಗಂ. 4 ನಿರ್ದುಷ್ಟಂ. 5 ರದಱಿನಿಂತೀ. 6 ವಶವಾಗಿ. 7 ವ್ಯಂತರ.

ವೃ ॥ ಪಣಮನೀ[1]ಯನಂ ಪ್ರಿಯಂನುಡಿದೆಂತುಂ ।
ಮಾಣೆ ಮತ್ತವನ ಪಂಬಲನೆಂತುಂ ॥
ಕೇಣಕಾಱನನದೇಕೆಗ[2] ಕಾವ್ಯೆ ।
ನಾಣಪುತ್ತ ನಗೆಯಂ ನೀಂ ಬಗೆಯ್ಯೆ ॥ 484

ಸೂತ್ರಂ ॥ 115 ॥

ಮಿಗೆ ದಲ್ ವಲಂ ವೆಱಂ ಮ ।
ತ್ತೆ ಗಡಂ ಗಳ ಕೆನ್ನ ಮೆಂಬನರ್ತ್ಥಕಪದಮಂ ॥
ಸೊಗಯಿಸೆ ವಾ[3]ಕ್ಯಾಲಂಕೃತಿ ।
ನೆಗೞ್ದೆಡೆಯೊಳ್ ಪೇೞ್ಗೆ ಪೇೞದಿರ್ಕ್ಕುೞಿದೆಡೆಯೊಳ್ ॥ 485

ಪ್ರಯೋಗಂ ॥

ವೃ ॥ ವಿರಹಿ ವೃಗಂ ದ[4]ಲಂಜಿಸುವವಂ ಮಧು ದಲ್ ಬಲೆಗಳ್ ಲತಾಳಿ ದಲ್ ।
ಕರಿಕು ಕನಲ್ದು ಕಾಯ್ದು ವಿರಹಾಗ್ನಿ ದಲೊಪ್ಪುವ ಕೆಯ್ದೊಳಂ ದ[5]ಲಾ ॥
ಗುರಿ ಪವನಂ ದಲೆಂಬಿನಮನಂಗನ ಬೇಂಟೆಯ ಬಿಂ[6]ದದಂತೆ ಬಂ ।
ದಿರೆ ಪೊಸಸುಗ್ಗಿ ಕೆಯ್ಗಳಿಯೆ ಕಣ್ಗೆಸೆದಿರ್ದ್ದುವು ನಂದನಾಳಿಗಳ್ ॥ 486

ಕಂ ॥ ಮಾವಿನ ಕೊನೆ ಮಾವಿನ ನನೆ ।
ಮಾವಿನ ಪೂ ಮಾವಿನೆಳೆಯ ಮಿಡಿ ಮಾವಿನ ಕಾಯ್ ॥
ಮಾವಿನ ಪಣ್ಣೆಂದು ಜನಂ ।
ಭಾವಿಸೆ ಸರ್ವ್ವಾಂಗಸುಂದರಂ ಮಾವೆ ವಲಂ ॥ 487

ವೃ ॥ ವಿಕ್ರಮವಹ್ನಿ ಮುನ್ನಳುರ್ದ್ದುಕೊಂ[7]ಡುದು ತನ್ಮನಿಯಂ ಗಡಶ್ವಮೇ ।
ಧಕ್ರತು ಧೂ[8]ಮಮಾದುದು ಗಡಂ ಬೞಿಯಂ ಶಿಖಿ ಧೂಮಯೋನಿಯೇಂ ॥
ಬೀಕ್ರಮಮೆಂತು ಪೇೞಿಮೆನೆ ವಿಕ್ರಮಯಜ್ಞವಿ[9]ಧಾನಮಂ ಧರಾ ।
ಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ ॥ 488

ತೊಳಗೆ ಪೊನ್ನರಥಂ ರಥವಾಜಿಗ[10]ಳ್ ।
ಕಿಳಿಱೆ ವೀರರಸಂ ಕರೆಗಣ್ಮೆ ಕಂ ॥
ಬಳಿಸೆ ಮೆಯ್ಮುವಿರಗ್ಗಳನೊ[11]ಪ್ಪಿದಂ ।
ಗಳ ಸಂತ್ಸುತನಾಹವಲಂಪಟಂ ॥ 489

ಅಂಕುರದಿಂ ಪ್ರವಾಳಚಯದಿಂ ನವಕುಟ್ಮಲಶೋಭೆಯಿಂ ಪಡಂ ।
ಗಂ ಕುಡುತಿರ್ಪ್ಪ ಪುಷ್ಪರುಚಿಯಿಂ ವಿಳಸತ್ಫಳಸಂಕುಳಂಗಳಿಂ ॥
ಪಂಕರುಹಾಸನಂ ಬರೆದು ಬ[12]ಚ್ಚಿಸಿದಂತಿರೆ ನೋೞ್ಪೊಡೆತ್ತಲುಂ ।
ತಾಂ ಕರವೊಪ್ಪಿತೋಱುವುದು ಬಂದ ಬಸಂತದೊ[13]ಳೊಂದು ಮಾಮರಂ ॥ 490

1 ನೀಯಾನಂ. 2 ಗಣಕವ್ಯೆ, ಗಳಕವ್ಯೆ. 3 ಕಾವ್ಯ. 4 ದಲಾಟ (ಡ) ಮೆವಪಂಮದನಂ. 5 ದಲಾನಂರಿವನಲಂ. 6 ಬೀಜದಂಪದಿಂ ಬರೆ. 7 ಕೊಂಡುದು. 8 ಧೂತ, ಮಾಹು. 9 ವಿಧಾನ. 10 ಯೊಳ್. 11 ಮೊಪ್ಪಿದಂ. 12 ಚಿತ್ರಿಸಿದಂತಿರೆ. 13 ದ ನಂದನಾಳಿಗಳ್.

ಕಂ ‖ ಪಗಲೊಪ್ಪದು ಕಶಿ ನಿಶೆಯೊಳ್ ।
ಸೊಗಯಿಸದರವಿಂದಮು ದಱಿನಂತೆರಡುಮನೆಂ ‖
ತು ಗಡ ಸಮನೆಂಬೆನಾಶಿಶು ।
ಮೃಗನಯನೆಯ ಪಗಲುಮಿರುಳುಮೊಪ್ಪುವ ಮೊಗಮಂ ‖ 491

ವೃ ‖ ಕೇಱಿ ಪೌರುಷಮನಾತ್ಮಪುಣ್ಯದಿಂ ।
ಬೇಱೆ ಮಾಡದೆ[1]ಸಪೊಂ ವಿರೋಧಿಯಂ ‖
ವಿಾ[2]ಱುಗುಂ ಮೆಱೆಮೆಱಂಕೆಯೊಂದಱಿಂ ।
ಪಾಱಲಾರ್ಕ್ಕ್ಮೆ ಪತತ್ರಿರಾಜನುಂ ‖ 492

ಕಂ ‖ ಆಕಥೆ ಮತ್ತಂತೆಂದೊಡೆ ।
ಭೀಕರಕರಿಮಕರನಿಕರಭಿನ್ನತರಂಗಾ ‖
ನೀಕಲವಣಾಂಬುರಾಶಿವೃ[3] ।
ತಾಕೃತಿಕಮನೀಯಮುಂಟು ಜಂಬೂದ್ವೀಪಂ ‖ 493

ವೃ ‖ ಬಿಚ್ಚತಮಿದ್ದರ್ ಕಣ್ಣ ಪಸವೋಡುವಿನಂ ಸಲೆ ನೀನೆ ನೋಡ ಪೆ ।
ಮ್ಮರ್ಚ್ಚರನಿಕ್ಕಲೆನ್ನ ಭುಜದಂಡಮೆ ಸಾಲದೆ ಕೆನ್ನಮೆಲ್ಲಿಯುಂ ‖
ಮ[4]ಚ್ಚದೊನಿಲ್ಲ ನಿನ್ನಳವನಿನ್ನದಱಿಂ ಗಳ ನೀನೆಯಾ[5]ನಕ ।
ವ್ಯಚ್ಚಿತನಯ್ ತ್ರಿಶಕ್ತಿಯುತನಯ್ ವಿಜಿಗೀಷುವಯಸ್ತ್ವವೈರಿಯುಸೆ ‖ 494

ಉೞಿದುವಕ್ಕ್ಮಿಾತೆಱದಿಂ ನೋಡಿಕೊಳ್ವುದು ‖

ಇದು ಕಾವ್ಯಮಲವ್ಯಾವೃತ್ತಿಯೊಳ್ ಕಾವ್ಯವಾಕ್ಯಾರ್ಥದೋಷಾನು
ಕೀರ್ತ್ತನಪ್ರಕರಣಂ ದ್ವಿತೀಯಂ ‖

ಗೀತಿಕೆ ‖ ಈಪೇೞ್ದ ಮಾೞ್ಕೆಯಿಂ ದೋಷಾ ।
ಲೇಪಂ ಪೊರ್ದ್ದದಂತಿರೆ ಸನ್ನಿಬಂಧ ‖
ವ್ಯಾಪೃತನಕ್ಕೆ ಗುಣವದರ್ತ್ಥಂ ।
ವ್ಯಾಪಕಮಾಗೆ ಕವಿತ್ವತತ್ವದೊಳ್ ‖ 495

ವೃ ‖ ಸ[6]ಮುಚಿತಕೃತಿದೋಷದೂಷ್ಯಮಾರ್ಗ ।
ಕ್ರಮಪರಿಭಾವಿತಚಿತ್ತವೃತ್ತಿಯಪ್ಪೊಂ ‖
ಗಮಳಿನಕವಿತಾಗುಣೋದಯಶ್ರೀ ।
ಸಮನಿಸುಗುಂ ಸತತಾಭಿಯೋಗದಿಂದಂ ‖ 496

ಸಾರವಿಚಾರಬಂಧುರಮತಿಪ್ರಸರಂ ಪರಿಪಕ್ವಶಾಸ್ತ್ರಸಂ ।
ಸ್ಕಾರನುಪೇತಕೌತುಕರಸಂ ವಿದಿತಾಗಮಲೋಕವೃತ್ತನು ‖
ತ್ಸಾರಿತಮತ್ಸರಂ ಸುಜನವತ್ಸಲನೆಲ್ಲಿಯುಮಿಾತನೆಂದು ಕೆ ।
ಯ್ವಾರದೆ ಬಣ್ಣಿಕುಂ ವಿಬುಧಮಂಡ? ಪಂಡಿತನಾಗವರ್ಮ್ಮನಂ ‖ 497

ಇದು ಸಕಳಸುಕವಿಜನಮನಸ್ಸರೋಜಸೀರೂಜಹಂಸಾಯಮಾನಾನೂನಕವಿತಾ
ಗುಣೋದಯಂ ಶ್ರೀನಾಗವರ್ಮ್ಮಪ್ರಣೀತಮಪ್ಪ ಕಾವ್ಯಾವಲೋಕನದೊಳ್
ಕಾವ್ಯಮಲವ್ಯಾವೃತ್ತಿಯೆಂಬುದು ದ್ವಿತೀಯಾಧಿಕರಣಂ ‖

1 ದೆಸೆಸಂ. 2 ವಿಾಱುಶುಂ. 3 ಕೃತಾಕೃತ, ವೃತಾಕೃತ. 4 ಮೆಚ್ಚದೊನ್ನ. 5 ಯಾನೆಕಾಬ್ಯುಚ್ಯುತನು. 6 ಸಮುದಿತ.

# 3. ಗುಣವಿವೇಕಾಧಿಕರಣಂ.

## ಮಾರ್ಗ್ಗವಿಭಾಗದರ್ಶನ ಪ್ರಕರಣಂ.

ವೃ ॥ ಇದು ಸೌಂದರ್ಯ್ಯಗುಣಪ್ರಕಾಶಮಿದು ತಾನಗ್ರಾವ್ಯತಾ[1]ಧಾನಮಿಂ ।
ತಿದು ಭಾಸ್ವತ್ಪರಭಾಗರಮ್ಯಮಿದು ಬಂ[2]ಧಾಶ್ಲೇಷವಿಚ್ಛಿತ್ತಿಗಾ ॥
ಸ್ಪದಮೆಂದಿಂ[3]ತುಚಿತಪ್ರಯೋಗವಿ[4]ಧಿಯಿಂ ಸ[5]ಯ್ತುಪ್ಪಿನಂ ತಿರ್ದ್ದಿರ್ಪೇ ।
ಟ್ಟಿದು ಪೂಮಾಲೆಯುನಿಂಬಿಸಿಂ ಸಮೆವಪೋಲ್ ಸತ್ಕಾವ್ಯಮಂ ಕಬ್ಬಿಗಂ ॥ 498

ಸೂತ್ರಂ ॥ 116 ॥

ನಿರತಿಶಯಕಾವ್ಯಶೋಭಾ ।
ಕರಂಗಳಾಗಿರ್ಪ್ಪ ಧರ್ಮ್ಮಮವು ಗುಣಮಕ್ಕುಂ ॥
ಪರಮಪುರಾಣಕವೀಶ್ವರ ।
ನಿರೂಪಿತಂಗಳ್ ವಿಚಿತ್ರಮಾರ್ಗ್ಗಯುತಂಗಳ್ ॥ 499

ಸೂತ್ರಂ ॥ 117 ॥

ಸಮಸಂಶ್ಲಿಷ್ಟಾರ್ತ್ಥವ್ಯ ।
ಕ್ತಿಮಧುರಕಾಂತಪ್ರಸನ್ನಸುಕುಮಾರೋಜ ॥
ಸ್ಸಮಭಿಮತೋದಾರಾಹ್ವಯ ।
ಸಮಾಧಿಗಳ್ ಕೃತಿಗುಣಂಗಳೀರಯ್ದಕ್ಕುಂ ॥ 500

ಅದೆಂತೆನೆ ॥

ಸೂತ್ರಂ ॥ 118 ॥

ಸಮಮೆಂಬುದು ಬಂಧದೊಳವಿ ।
ಷಮಂ ಮೃದುಸ್ಫುಟವಿಮಿಶ್ರವಿನ್ಯಾಸಪದ ॥
ಕ್ರಮದಿಂ ಮೂಱುಂ ತೆಱಂ ಬಂ ।
ಧಮುಮಂ ಯಥಾರ್ತ್ಥಾನುವೃತ್ತಿಯಿಂ ಪತ್ತಿಸುಗುಂ ॥ 501

ಉದಾಹರಣೆ ॥

ಮೃದುಬಂಧಕ್ಕೆ ॥

ಕಂ ॥ ಶರದದೊಳೂನಲ್ದು ಬಿಡುತುಂ ।
ಧ[7]ರೇಂದ್ರಗಿರಿಕರಿಗಳುಡಿಯೆ ಪಾಯ್ದುವು ಕಾಯ್ಪಿಂ ॥
ಕರಟತಟಗಳಿತಮದಜಳ ।
ಪರಿಮಳಸಮವಿದಳದಳಿಕುಳಂ ನಗಕುಳಮಂ ॥ 502

1 ತಾದಾನ. 2 ಬಂಧಾಶೇಪ. 3 ದೇಮ. 4 ವಿಧಿಯುಂ. 5 ಸಯ್ತುಪ್ಪಿನಂ. 6 ಪಗ್ಗೊರ್ಕ್ಕೆ. 7 ದುರುಗೆಂದರ

ಸ್ಫುಟಬಂಧಕ್ಕೆ ॥

ಕಂ ॥ ಅಂಭೋನಿಧಿಗಂಭೀರಂ ।
ಶುಂಭದ್ಭುಜಗೇಂದ್ರಭೋಗನಿಭಭುಜಪರಿಘಂ ॥
ಜಂಭಾರಿವೈಭವಂ ವಿ ।
ಶ್ವಂಭರೆಗಧಿನಾಥನಶ್ವಕಂಠಂ ಖಚರಂ ॥ 503

ಮಿಶ್ರಬಂಧಕ್ಕೆ ॥

ಕಂ ॥ ಹ[1]ಸ್ತಾವಚಯದಿನುರುಪು ।
ಷ್ಪಸ್ತಬಕಮನುನ್ಮದಭ್ರಮದ್ಭ್ರಮರಪರಿ ॥
ತ್ರಸ್ತಮತಿ ಮೆಲ್ಲನೆಱಗಿ ಘ ।
ನಸ್ತನವತಿ ಕೊಯ್ದಳಾಮ್ರಶಾಖೆಯೊಳೊರ್ವ್ವಳ್ ॥ 504

ಸೂತ್ರಂ ॥ 119 ॥

ಅಶಿಥಿಲಪದಚಯರಚನಾ ।
ತಿಶಯಂ ಸಂಶ್ಲಿಷ್ಟಮೆಂಬುದಕ್ಕುಂ[2] ನೇಯಂ ॥
ವಿಶದಾರ್ತ್ಥಂ ಶಬ್ದಾನ್ವಯ ।
ವ[3]ಶಮರ್ತ್ಥವ್ಯಕ್ತಿಯೆಂದು ಪೇೞಲ್ಪಡೆಗುಂ ॥ 505

ಉದಾಹರಣೆ ॥

ಸಂಶ್ಲಿಷ್ಟಕ್ಕೆ ॥

ಕಂ ॥ ಅದಿರದಿದಿರಿದಿರನೆಯ್ತಂ ।
ದೊದಱುತ್ತುಂ ಪೊಕ್ಕು ಪಟುಪವಿಪ್ರತಿಮಭುಜಂ ॥
ಕೆದಱಿ ಮೆಱೆದೋವದೆಚ್ಚಂ ।
ಕದನದೆ ವಿದ್ವಿಡ್ಬಳಪ್ರಧಾನರನಿಂದ್ರಂ ॥ 506

ಅರ್ತ್ಥವ್ಯಕ್ತಿಗೆ ॥

ಕಂ ॥ ಒರಂತೆ ಪರೆದ ನವಸಂ ।
ಧ್ಯಾರುಚಿಯಿಂದಪರದಿಗ್ವಿಭಾಗದೊಳಿನಿಸೊಂ ॥
ದಾರಕ್ತಮಾಗಿ ನೇಱಿಲ ।
ದೋರೆಯನನುಕರಿಪುದಾದುದಾಗಸಮಾಗಳ್ ॥ 507

ನೇಯಕ್ಕೆ ॥

ಕಂ ॥ ಆರಕ್ತಮಾಗಿ ನೇಱಿಲ ।
ದೋರೆಯನನುಕರಿಪುದಾದುದಾಗಸಮೆನೆ ಸಂ ॥
ಧ್ಯಾರುಚಿಯಿನಕ್ಕುಮೆಂದವ ।
ಧಾರಿಸಿ ನೆಱೆ ಮಱೆದುಕೊಳ್ವುದಿ[4]ದು ನೇಯಾರ್ತ್ಥಂ ॥ 508

1 ಹಸ್ತಾವಶಿ(ಥಿ)ಚಯಮಂ. 2 ಕ್ಕುಮಮೇಯಂ. 3 ಮಸ. 4 ದದು.

## ಸೂತ್ರಂ ॥ 120 ॥

ಅಗ್ರಾಮ್ಯವಚನವೃತ್ತಿ ಸ ।
ಮಗ್ರರಸಾಪೂರ್ಣ್ಣಮಪ್ಪುದದು ಮಧುರಂ ನಿ ॥
ರ್ವ್ಯಗ್ರಪ[1]ದವಿಸ್ಫೃತಿ ಪರಚಿ ।
ತ್ತಗ್ರಹಣಸಮರ್ತ್ಥಮಪ್ಪುದಂತದು ಕಾಂತಂ ॥ 509

ಉದಾಹರಣೆ ॥

ಮಧುರಕ್ಕೆ ॥

ಕಂ ॥ ಅಳಿಕುಳರುತಿಗಳಿನವನತ ।
ಫಳತರುಗಳಿನುಚಿತಕುಸುಮಗಂಧದಿನಬಳಾ ॥
ವಿಳಸನದಿಂದೀವುದು ಗಂ ।
ಧಿ[2]ಳವಿಷಯಂ ಸಕಳವಿಷಯರಸರಸಿಕತೆಯಂ ॥ 510

ಕಾಂತಕ್ಕೆ ॥

ಕಂ ॥ ಅರಸಾಳ್ತನಮೆನ್ನದೆ ಕೇಳ ।
ಪರಮಾರ್ತ್ಥಮನೀಗಳೆ[3]ನಗೆ ಸಾಮ್ರಾಜ್ಯಪದಂ ॥
ದೊರೆಕೊಂಡಂತಾದುದು ಪೋ ।
ಲ್ತಿರೆ ದೇವರ ಬರವೆ ದೇವದೇವರ ಬರವಂ ॥ 511

## ಸೂತ್ರಂ ॥ 121 ॥

ಅತಿರೂಢಾರ್ತ್ಥಮಗೂಢಂ ।
ಪ್ರ[4]ತೀತಿಸುಭಗಂ ಪ್ರಸನ್ನಮೆನೆಪಡೆಗುಮಪಾ ॥
ಕೃತನಿಷ್ಠುರಾಕ್ಷರಂ ಲಾ ।
ಲಿತಲಲಿತಪದಪ್ರಕಾರಮದು ಸುಕುಮಾರಂ ॥ 512

ಅವರ್ಕ್ಕನುಕ್ರಮಪ್ರಯೋಗಂ ॥

ಕಂ ॥ ಮಡುಗಳೊಳಗಲರ್ದ ನೆ[5]ಯ್ದಿಲ ।
ಕಡುಗಂಪುಮನಿವಱ ಕಂ[6]ಪೆ ಗೆಲ್ದುವು ಸಾಸಿ ॥
ರ್ಮ್ಮಡಿಯೆನೆ ಪೊಂಬಣ್ಣದ ಕೆಂ ।
ಪಿಡಿದಿರೆ ಸೊಗಯಿಪುವು ಗಂಧಶಾಲಿವನಂಗಳ್ ॥ 513
ಮಣಿಭವನಂಗಳ ರುಚಿಗಳ್ ।
ಪೆಣೆದು ನಭೋಂಗಣದೊಳಮರಚಾಪವಿಳಾಸ ॥
ಕ್ಕೆಣೆಯಾಗಿರೆ ಬಹುವಿಧದಿಂ ।
ಕಾಣಿವುವು ಕಾರ್ಗ್ಗತ್ತಲೆ ಕೇಗಿ ಸೋಗೆನವಿಲ್ಗಳ್ ॥ 514

1 ಪರಸ್ಪರತಿರಚಿತೆಯಾ । ಪಗ್ರಹಣ. 2 ಧಿಳ. 3 ಳಮ್ಯ. 4 ಪ್ರತೀತಿ. 5 ನೆಯ್ದಿಲ. 6 ಕಂಪು.

## ಸೂತ್ರಂ ॥ 122 ॥

ಪಿರಿದುಂ ಸಮಾಸಮಾಗಿರೆ ।
ವಿರಚಿಸುವುದು ತಾನದೋಜಮಕ್ಕುಂ ಲೋಕೋ ॥
ತ್ತರವರ್ಣ್ಣನಂ ವಿಶೇಷಣ ।
ಪರಪ್ರಕರ್ಷೋಕ್ತಿಯುಕ್ತಮಪ್ಪುದುದಾರಂ ॥ 515

ಉದಾಹರಣೆ ॥

ಓಜಕ್ಕೆ ॥

ಕಂ ॥ ಬಕಕುರರಪಕ್ಷವಿ[1]ಕ್ಷಿ ।
ಪ್ತಕಂಜಕಿಂಜಲ್ಕಪುಂಜಪಿಂಜರಿತಾಚ್ಛೋ ॥
ದಕಪರಿಪೂರ್ಣ್ಣತಟಾಕ ।
ಪ್ರಕರಸರೋನಿಕರರಂಜಿತಾಶಾವಲಯಂ ॥ 516

ಉದಾರಕ್ಕೆ ॥

ಕಂ ॥ ಬಹುಪೋ[2]ಷಣದಿಂ ಮಾವಿನ ।
ಸಹಕಾರದ ಸೊನೆಯ ಸೋನೆ ಬೆಳೆಯಿಸೆ ಬೆಳೆಗುಂ ॥
ಮಹಿಯೆನೆ ಬಣ್ಣಿಸುವ ಪಿತಾ ।
ಮಹಂಗಮುರಿದಗ್ಗ ಮೊಗ್ಗೆ ನಿನಗಮದೆನಗಂ ॥ 517

ಮತ್ತಮಲ್ಲಿ ಶ್ಲಾಘ್ಯವಿಶೇಷಣಕ್ಕೆ ॥

ಕಂ ॥ ಮನೆಮನೆದಪ್ಪದೆಯುಂ ಪಳು ।
ಕಿನ ಕೇರ್ಗ್ಗಳ್ ಪವಳದೆಸೆವ ಕಂಬಂ ಕಕ್ಕೇ ॥
ತನದ ತೊಲೆ ಪೊನ್ನ ಪೊಸಜಂ ।
ತೆ ನೀಲದಡಿಗಲ್ಗಳೆಂದೊಡೇವಣ್ಣಿಪುದೋ ॥ 518

## ಸೂತ್ರಂ ॥ 123 ॥

ಪೆಱವಱ ಧರ್ಮ್ಮಂಗಳನೇ ।
ತೆಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕ ॥
ಣ್ಣೆಱೆಯೆ ಚತುರೋಕ್ತಿ ಕೃತಿಯೊಳ್ ।
ನೆಱೆದಿರೆ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ ॥ 519

ಉದಾಹರಣೆ ॥

ಕಂ ॥ ವಿನಿಮೀಲಿತನೀಲಾಂಬುಜ ।
ವನಮುನ್ಮೀಲಿತನವೀನಕಮಲವನಂ ತ ॥
ದ್ದಿನಮುಖದೊಳ್ ಮಧುಪಾಳಿಗೆ ।
ಜನಿಯಿಸಿದುವು ಪೞೆಯ ಸುಸಿಲ ಪೊಸ ಸುಸಿಲಿಂಪಂ ॥ 520

1 ನಿಕ್ಷಿ. 2 ಘೋಷಣದಿಂ, ವರ್ಷಣದಿಂ,

ಸೂತ್ರಂ ॥ 124 ॥

ಇವು ನಿಯತಂ ದಕ್ಷಿಣದೇ ।
ಶವರ್ತಿಕವಿರಾಜಮಾರ್ಗದೊಳ್ ನೆಗೞ್ಗಂ ಮ ॥
ತ್ತವಱ ವಿಪರ್ಯಯವೃತ್ತಿಯಿ ।
ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ ॥ 521

ಸೂತ್ರಂ ॥ 125 ॥

ವೈದರ್ಭಗೌಡಮಾರ್ಗವಿ ।
ಭೇದಂ ಬಗೆವೊಡೆ ಗತಾಸುಗತಿಕಮಿದೆಂದೋ ॥
ಲ್ಲಾದರಿಪರ್ ಕೆಲಬರ್ ಸಂ ।
ವಾದದೊಳೆರಡುಂ ಸ[1]ಮರ್ಥಮಪ್ಪುದಱಿಂದಂ ॥ 5'2

ಇದು ಗುಣವಿವೇಕದೊಳ್ ಮಾರ್ಗವಿಭಾಗದರ್ಶನಪ್ರಕರಣಂ ಪ್ರಥಮಂ ।

---

ಶಬ್ದಾಲಂಕಾರನಿರ್ಣಯಪ್ರಕರಣಂ.

ಸೂತ್ರಂ ॥ 126 ॥

ನಿಜದಿಂದಂ ಚೆಲ್ವೆಗೆ ವಿಬು ।
ಧಜನಪ್ರಿ[2]ಯೆಗ[3]ಖಿಳಲೋಕವಿನುತ ಪ್ರಮದಾ ॥
ಗ್ರಜೆಗೆ ಕೃತಿಸ[4]ತಿಗೆ ಶಬ್ದಾ ।
ರ್ಥಜಾತಮುಂತೆರಡು ತೆಱದಲಂಕೃತಿಯಕ್ಕುಂ ॥ 523

ಸೂತ್ರಂ ॥ 127 ॥

ಅವಱೊಳ್ ಶಬ್ದಾಲಂಕಾ ।
ರವಿಭಾಗಂ ಯಮಕಮೆಸೆವನುಪ್ರಾಸಂ ಚಿ ॥
ತ್ರವಿಚಿತ್ರಭಿತ್ತಿ ವಕ್ರೋ ।
ಕ್ತಿವಿಶೇಷಮುಮೆನೆ ಚತುರ್ವಿಧಂ ತಾನಕ್ಕುಂ ॥ 524

1 ಸದರ್ಥ. 2 ಪ್ರತೆ. 3 ಗಭಿವಿನುತಕೀರ್ತಿ. 4 ಸಮುಗೆ.

ಅವಱೊಳಗೆ ||

ಸೂತ್ರಂ || 128 ||

ಪದವರ್ಣ್ಣವ್ಯಾವೃತ್ತಿ ದ |
ಲ[1]ದು ಯಮಕಂ ವ್ಯವಹಿತಾ[2]ವ್ಯಪೇತತಾತ್ಮಂ ಮ ||
ತ್ತದು ಪಾದದಾದಿಮಧ್ಯಾಂ |
ತದೊಳಕ್ಕುಮನೇಕಭೇದನಿಯತಸ್ಥಿತಿಯಿಂ || 525

ಉದಾಹರಣೆ ||

ವ್ಯವಹಿತಕ್ಕೆ ||

ಕಂ|| ಮಾಣಿಕದಂತೊಪ್ಪಿದನೀ |
ಮಾಣಿ ಕರಂ ಕ[3]ಱಿಯೆ ಚೆಲ್ವುವಡೆದೆಂಬಿನೆಗಂ ||
ಕ್ಷೋಣಿಯನಳೆಯಲ್ ಮುನ್ನಂ |
ಕ್ಷೋ[4]ಣಿಮನಂ ವಿಷ್ಣು ತಾನೆ ವಾಮನನಾದಂ || 526

ತಿಂದುಕಪೀನಫಲಂಗಳ |
ನೊಂದೊಂದೆಡೆಗಳೊಳಲಂಪು ಪೋಪನ್ನೆವರಂ ||
ತಿಂದು ಕಪೀನಕುಳಂ ವೃತಿ |
ಯಂದದಿನಿರ್ಪ್ಪುದು ನಿಯುಕ್ತವನ್ಯಾಕನದಿಂ || 527

ಫಲಸಾರಸನವುವಂತೆ |
ತ್ತಲುವೊದವಿರೆ ಕುಳಿರ್ವ ಪುಱಿಲೊಳಿರ್ದಗೊಳ್ವೆನೆಗಂ ||
ಕಲರುತಿಯಂ ಪಾಡಿದುದು |
ತ್ಪಲಸಾರಸನಂ ಪುಳಿಂದಲಲನಾನಿಕರಂ || 528

ಆಲೋಚಂ ಸಾಲದೆ ಶಿಶು |
ಪಾಲನನುಱದಿಕ್ಕಿ ಮಿಕ್ಕ ಭುವನಸ್ಥಿತಿಯಂ ||
ಪಾಲಿಸು ನೀಂ ನಿನಗೆ ಜಗ |
ತ್ಪಾಲನವಿಜ್ಞಾನಮಂ ಪೆಱರ್ ಪ್ರಕಟಿಪರೇ || 529

ಸರಭಸದೆ ಕಾಲಯ[5]ಮನಾ |
ಲ್ವ[6]ರುಕ್ಮಿಬಾಣದ್ರುಮಾದಿಗಳ್ ವೆರಸಖಿಲಾ ||
ಸುರಚಕ್ರಂ ನಿನ್ನ ವಿಭಾ |
ಸುರಚಕ್ರದ ಬಾಯ್ಗೆ ಬಾರದಿರದು ಮುರಾರೀ || 530

ತಱಿಸಂದಿಸೆ ಕರಿಘಟೆಯಂ |
ತು[7]ಱುಗಿರೆ ಪಾಯ್ದುವು ಶಿಲೀಮುಖಂ ಪುಷ್ಕರದೊಳ್ ||
[8]ಗಱಿ ಸಂದಿಸೆ ಮೊರೆದೊಮ್ಮೊದ |
ಲೆಱಗುವ ಱಿದಿಂ ಶಿಲೀಮುಖಂ ಪುಷ್ಕರದೊಳ್ || 531

1 ಲದೆ. 2 ತಜ್ಯ. 3 ಕಳೆಯ. 4 ಕ್ಷೋಣಿಪನಂ, ಕ್ಷೋಣಿಪರಂ. 5 ಯಮನಂ. 6 ಸುರಚಿರಬಾಣ. 7 ಮಱುಗಿರೆ. 8 ತಱಿ, ಕಱಿ.

ಕಂ ॥ ನೆಯ್ದಿಲೆಸಱಿವಱ ಪೋಲ್ವೆಯ ।
ನೆಯ್ದಿಲೆ ದಲ್ ಪಡೆದುವಿಲ್ಲ ಲೋಕವಮನಲೆಯ ॥
ಲ್ಕೆಯ್ದುಮಲರ್ಗಣೆಗಳ್ಕೆ ರ್ಗಮ ।
ಕೆಯ್ದುಮನೋಜಂಗೆನಿಪ್ಪುವಾಕೆಯ ಕಣ್ಗಳ್ ॥ 532

ಮಲರೆ ತವಮದೊಡ್ಡು ಪಂಕಜ ।
ಮಲರೆ ವಿನೀಲೋತ್ಪಲಾಳಿ ಮುಗಿಯೆ ಖಲರ್ ಸಂ ॥
ಚಲಿಸುತ್ತುಮುಗಿಯೆ ಜಗತೀ ।
ವಿಲೋಚನಂ ಮೂಡಿದಂ ವಿಲೋಚನನಾಗಳ್ ॥ 533

ಅವಮಳ್ಗಳ ನ[1]ಯವಿಕ್ರಮಗುಣ ।
ದವಮಳ್ಗಳ ನೃಪಶಾಸ್ತ್ರಶಸ್ತ್ರಪರಿಣತರ[2]ವರಂ ॥
ಸಮಥದೊಳುದಗ್ರಶೌರ್ಯ್ಯಂ ।
ಸಮರ[3]ಸಸಂಪನ್ನನಾವನುಱದಾಂಪನ್ನಂ ॥ 534

ಮಂತಣಕಂ ಚದುರರ್ ಗಡ ।
ಮಂತಣಕಂ ನೆಗೞೆ ಬಂದರೆನಿಸಿದ್ದುರ್ಗಂ ತಾಂ[4] ॥
ಮಂತಣಮುಸಿರದೆ ಕೆ[5]ಲರಾ ।
ಮಂತಣಮುಂಡಂತೆ ಪೆಱರ ನಯದೊಳೆ ತಣಿವರ್ ॥ 535

ಈಧರೆಯ ಪೆಂಡಿರುದ್ಧಪ ।
ಯೋಧರೆಯ ಮನೋಜರಾಗರಸಪೂರಿತಬಿಂ ॥
ಬಾಧರೆಯ ಕಂಬುಕಮ್ರಕಿ ।
ರೋಧರೆಯ ಪೆಡಂಗನಾರುಮೋನೆಯ್ದುವರೇ ॥ 536

ವೃ ॥ ಪನ್ನಗಕನ್ಯೆಯೊರ್ವ್ವಳುಪದೇಶಮನಿತ್ತಳೊ ನಾಗಬಂ[6]ಧಮಂ ।
ಪನ್ನಗಕನ್ಯೆಯೋ ಜೆತೆಯೊ ಮೆಯ್ಯೆರಡಿಲ್ಲೆನಿಪಪ್ಪುಗಳ್ಗತ ॥
ತ್ಪನ್ನಗಕನ್ಯೆಯಪ್ಪುಗ[7]ಳೆ ಮುಪ್ಪುರಿಗೂಡಿದುವೆಂಬ ಮಾತು ಮೆ ।
ಲ್ಪನ್ನಗಕನ್ಯೆಗ[8]ಳ್ಪುಗುಮಿವಕ್ಕೋರ್ವಜರ್ ನಿನಗಾರೊ ನಲ್ಲಳೇ ॥ 537

ಪಾದಾದಿಯಮಕಕ್ಕೆ ॥

ಕಂ ॥ ಉಪದಾತ್ತನುತೋನ್ನತಮಂ ।
ದ್ವಿಪಮದಪರಿಪೂರ್ಣ್ಣಗಿರಿಸರಿತ್ಸಂತತಿಯಂ ॥
ಉ[9]ಪದಾತ್ತನುತೋನ್ನತಮಂ ।
ತಪನಕರೋತ್ತಪ್ತಸತಪ್ತತಪನೋಪಲವಂ ॥ 538

---

1 ನಯಗುಣವಿಕ್ರಮ. 2 ರವರುಂ. 3 ರದ. 4 ಅ. । ಮಂತಣ. 5 ಕೆಲರುಂ. 6 ಬಂಧದ. 7 ಗಳ. 8 ಪಡ್ಡುಗು. 9 ಮಪ, ನುವ.

ಮಧ್ಯಾಂತಯಮಕಕ್ಕೆ ॥

ಕಂ ॥ ನಾನಾಶಶವೃಗಧ[1]ರವಂ ।
ಸಾನುಜತರುಶಿಖರಲಗ್ನಶಶವೃಗಧ[1]ರವಂ ॥
ಪೀನಸರೋಜಾಲಯವಂ ।
ವಾನೇಚರಯುವತಿಜಿತಸರೋಜಾಲಯವಂ ॥ 539

ಅಂತ್ಯಯಮಕಕ್ಕೆ ॥

ಶ್ಲೋ ॥ ಸಂದ ಸರ್ವ್ವಗ[2]ತಂ ಧರ್ಮ್ಮ ।
ನಂದನಾಧ್ವರತೋಷಿತಂ ॥
ನಿಂ[3]ದು ಯಾತ್ರೇಚ್ಛೆಯೊಳ್ ಧರ್ಮ್ಮ ।
ನಂದನಾಧ್ವರತೋಷಿತಂ ॥ 540

ಅವ್ಯಪೇತಕ್ಕೆ ॥

ವೃ ॥ ಸರಂ ಸರಂ ಕಂತುವ ಮನ್ಮಥಾಂಬುಜಾ ।
ಕರಂ ಕರಂ ನೋಡೆ ಮೊಗಂ ವಳಿತ್ರಯಾಂ ॥
ತರಂ ತರಂಗಂ ಸ್ಮರಸಿಂಧುಗಾಲತಾಂ ।
ಕುರಂ ಕುರಂಗಾಕ್ಷಿಯ ಕ[4]ಣ್ ಮನೋಜನಾ ॥ 541

ಕಂ ॥ ಸುರರಮಣೀರಮಣೀಯ ।
ಸ್ವರೂಪಮತಿತರಳತರಳವಿಲಸದ್ವಿದ್ಯುತ್ ॥
ಸ್ಫುರಿತಮೆನೆ ಪೋಲ್ತು ಕರಗಿದು ।
ದರಗಿದು ದಹನೋಪತಪ್ತಮೆನೆ ತತ್‌ಕ್ಷಣದೊಳ್ ॥ 542

ಶ್ಲೋ ॥ ನಿನ್ನವಾಕ್ಯಾರ್ತ್ಥಮೆಂಬೊಂದು ।
ರನ್ನಕಂ ಬೆಗಡಂಗಡಂ ॥
ತನ್ನುಕ್ತಿಯಾಗೆ ತದ್ವಿದ್ಯ[5] ।
ನನ್ನನಾದಂ ಬಲಂಬಲಂ ॥ 543

ವ್ಯಪೇತಾವ್ಯಪೇತಕ್ಕೆ ॥

ಕಂ ॥ ಸಬಳಿಕೆಯಿಂ ಪಾ[6]ಱಿಯನೊ ।
ಕ್ಕುಬೇರನಂ[7]ತಾಕುಬೇರನಾಯಕನತಿವಿ ॥
ಕ್ಲಬಚಿತ್ತಂ ತೊಟ್ಟಗೆ ತಾ ।
ಗಿಬಾಗಿದಂ ತಾಗಿಬಾಗಿದಂ ನರನಡಿಯೊಳ್ ॥ 544

ವರ್ಣಾವೃತ್ತಿಯಮಕಕ್ಕೆ ॥

ವೃ ॥ ಚಾರೂರೂರೂ[8] ಧ್ಧರೂರೂರುರುಭುಜಶಿಖರೋದ್ಭಾಸಮಾನಾವಲೋಕಂ ।
ಕ್ರೂರಾರಾರಾ[9]ತಿರಾ[10]ರಾಜಕಮುಪಡಿನುಡಿಯುತ್ತುಂ ಮುರಧ್ವಂಸಿಯೊಳ್ ಸ ॥
ದ್ಧಾರಾರಾರಾಜಿರಾರಾಜಿತಭುಜನೊಳವಷ್ಟಂಭದಿಂ ಚೆಲ್ವುಕೆಯ್ಮ್ ।
ಕ್ಕಾರಾರಾರಾಧ್ಯರಾರಾರವರವರವರ್ಗಂತೊಪ್ಪಿದಂ ನೀಲಕಂಠಂ ॥ 545

---

1 ಧರನುಂ. 2 ರತು. 3 ನಿಂದಯುವೃತ್ತ್ರೇಚ್ಛೆಯೊಳ್. 4 ಮಯು. 5 ದ್ಯಾ. 6 ಕಾಳ್. 7 ದಂತಾ.
8 ರುದ್ರರೋರೂ. 9 ರಾತ್ರಿ. 10 ರೇರೇಚಪುಷಗ, ಪ್ಯೃಚಾನನಪಟು.

ಸೂತ್ರಂ ॥ 129 ॥

ಪರಿವೃತ್ತಂ ಸಂದಷ್ಟಂ ।
ನಿರಂತರಾವಳಿ ಸಮುದ್ಗಮೆಂಬಿವು ಮೊದಲಾ ॥
ಗಿರೆ ಯಮಕಭೇದಮನಿತುಂ ।
ಪರಿಭಾವಿಸೆ ತತ್ಪ್ರಪಂಚದೊಳ್ ಪೊಕ್ಕಿರ್ಕ್ಕುಂ ॥ 546

ಉದಾಹರಣೆ ॥

ಪರಿವೃತ್ತಕ್ಕೆ ॥

ವೃ ॥ ತಾರಾತಾರಾಮಳಿನಗುಳಿಕಾಹಾರನೀಹಾರನೀಕಾ ।
ಕೋರುಸ್ಫೂರ್ಜತ್ಪ್ರವಿ[1]ತತಯಶೋರಂಜಿತಾಶೇಷಲೋಕಂ ॥
ಸಾರಾಸಾರಾದ್ಯನುಗತವಿಚಾರೋಚಿತಾತ್ಮೀಯಚಿತ್ತೋ ।
ದಾರಪ್ರಜ್ಞಂ ನೆಗಳ್ದಿನವನೀಭಾಗದೊಳ್ ನಾಗವರ್ಮ್ಮಂ ॥ 547

ಸಂದಷ್ಟಕ್ಕೆ ॥

ವೃ ॥ ಒರೊರ್ವ್ವರ್ ಸೆಣಸಿ ತಗುಳ್ದನೇಕವಾರಂ ।
ವಾರಸ್ತ್ರೀಜನಮಿದಿರೊಳ್ ತುಳುಂಕೆ ನೀರಂ ॥
ನೀರಂಧ್ರಸ್ತನತಟದೊಳ್ ಕೃತೋಪಹಾರಂ ।
ಹಾರಶ್ರೀಗೆಣೆಯೆನಿಸಿತ್ತು ವಾಷ್ಕಣೌಘಂ ॥ 548

ಆವಳಿಗೆ ॥

ಕಂ॥ ಶ್ರೀಯುಂ ಶ್ರೀಯುಂ ದ್ವಿ[2]ಷದವ ।
ನಾಯಕನಾಯಕಪರಂಪರಂ ಲಲಿತಯುವ ॥
ತ್ಯಾಯತನತ್ಯಾಯತನಂ ।
ಗೇಯೋದ್ಗಾಯತ್ಸಕಳಕಳಂ ಸಕಳಕಳಂ ॥ 549

ಸಮುದ್ಗಕ್ಕೆ ॥

ಶ್ಲೋ॥ ಹರಿದಾಂ[3]ತಂ ಬಲಂಬೆಚ್ಚೆರ್ ।
ಸುರಾಸುರಸಭಾಜನಂ ॥
ಹರಿದಾಂ[3]ತಂ ಬಲಂ ಚ್ಚೆರ್ ।
ಸುರಾಸುರಸಭಾಜನಂ ॥ 550

ಸೂತ್ರಂ ॥ 130 ॥

ಬವಕಾರಂಗಳ್ ಪಹವ ।
ರ್ಣ್ಣವೆರಡುಮವಿಭೇದದಿಂದೆ ಸಲ್ಗುಂ ಸಾಯೋ ॥
ಗವಿಶಿಷ್ಟಮುಂ ಸ್ವ[4]ರೂಪಮು ।
ಮವಿಕಲ್ಪದೊಳೊಂದಿ ನೆ[5]ಗಳ್ಗುಮವು ದುಷ್ಕರದೊಳ್ ॥ 551

1 ಘಟಿತ. 2 ದ್ವಿಷದವ. 3 ದಾಂತಬಲಂ. 4 ಸ್ವರೂಪಸ್ವವಿಕಲ್ಪ. 5 ನೆಗಳ್ಕುವು.

* ಲಕ್ಷ್ಯಂ ॥

ಕಂ ॥ ನವಲ[1]ಕ್ಕಂ ಕಟಕದೊಳ್ ।
ನ್ನವಲ[1]ಕ್ಕಂ ನಿ[2]ಜವೆ ಪ[3]ರಿದು ವಿಬುಧನಿಕಾಯಮು ॥
ಕ್ಕ[4]ವಳಂಬನವಪ್ಪ . ।
ಕ್ಕವಳಂ ಬಚನೈಕಸಾರವೆಂಬೀ ನುಡಿಯುಂ ॥ 552

ಪಿಂಗಿದ.ದಿಲ್ಲಿನ್ನುಂ ಮಾನ ।
ದಿಂ ಗೋವರ ಗಡಣದೊಳ್ ದನಂಗಾಹಿತನಂ ॥
ನೀಂಗಳದೆತ್ತಱಿವಿರ್ ಬ ।
ಮರ್ಮ್ಮಂಗಂ ಬಗೆದಱಿವುದರಿದನಂಗಾಹಿತನಂ ॥ 553

ಆ ಗಿರಿಯ ನಿತಂಬಂ ಶೋ ।
ಭಾಗುಣಮಂ ತಳೆದುದಪ್ಸರಃಕುಲಲಲಿತಂ ॥
ಮೇಗಣ ಶಿಖರಾಗ್ರಮು[5]ಮಿಂ ।
ಬಾಗಿ ಮನಕ್ಕೆಸೆವುದಪ್ಸರಃಕುಲಲಲಿತಂ ॥ 554

ಸೂತ್ರಂ ॥ **131** ॥

ಸದೃಶಾಕ್ಷರವಿನ್ಯಾಸಂ ।
ಪದದೊಳ್ ಪಾದಂಗಳೊಳ್ ಪೊದಱ್ದೆಸೆದಿರೆ ಪೇ ॥
ಱ್ವುದನುಪ್ರಾಸಂ ನಿಯಮದಿ ।
ನದನಾದ್ಯಂತಂ ವಿಭಾಷೆಯಿಂ ವಿರಚಿಸುವರ್ ॥ 555

ಪ್ರಯೋಗಂ ॥

ಕಂ ॥ ಚರ್ಚ್ಚಲ್ ಶಶಿಶಿಲವಂ ಕಱಿ ।
ಗರ್ಚ್ಚಲ್ ಘನಘಟೆಯನುರ್ಚ್ಚಲಮರದ್ರುಮಮಂ ॥
ಸಾರ್ಚ್ಚಲಿನನೆಂಬ ಸೊಡರನೊ ।
ಡರ್ಚ್ಚಿದುವೆನೆ ನೀಳ್ದ ವಿ[6]ದಱ ಶಿಖರಕರಂಗಳ್ ॥ 556

ವೃ ॥ ಸೋಡಂಬಾಡಂ ಕರಿಯ ಮುಗಿಲಂ ದಂತಿಗಳ್ಗತ್ತು ಮಿಂಚಂ ।
ನೋಡಲ್ ನೀಡುಂ ಪೊಳೆವ ನಿಶಿತಾಸ್ತ್ರಾಳಿಗೆತ್ತೆತ್ತಮೊ[7]ತ್ತಂ ॥
ಕಾಡುಂ ಕೋಡುಂ ಹಯಮಯಮೆಗೆತ್ತುದ್ಘಗೇ[8]ಹಂಗಳೊಳ್ ಸಂ ।
ವ್ರೀಡಾಪೀಡಂ ವಿರಹಿಜನಮಂದಳ್ಕಿ ಬೆಳ್ಕುತ್ತುದೆತ್ತಂ ॥ 557

ಕೆಳರೆ ವಿರಹಿವೃಂದಂ ಪುಷ್ಪಿತಾಶೋಕದಿಂದಂ ।
ತ[9]ಳರೆ ಕುಸುಮಜಾಳಂ ಬಾಳಚೂತಪ್ರವಾಳಂ ॥
ಪೊಳೆಯೆ ಪುಱಿಲ ತಣ್ಪಂ ನೊಳ್ದಿ ತಱ್ಕೈಸಿ ಬಿಣ್ಪಂ ।
ಬಳೆಯೆ ಮದನದಾಹಂ ಬೀಸುಗುಂ ಗಂಧವಾಹಂ ॥ 558

* ಲಕ್ಷ್ಯಂ ಎಂಬುದಕ್ಕೆ ಹಿಂದೆ 'ಈ ಕಾರಾರ್ತ್ಥವ್ಯಾವೃತ್ತಿಗ್ರಹಣಮುದಕ್ಕಂ' ಎಂದೂ 'ಈ ಕಾರಿಕಾರ್ತ್ಥವ್ಯಾವೃತ್ತಿಗ್ರಹಣಮುದಕ್ಕೆ' ಎಂದೂ ಪ್ರತಿಗಳಲ್ಲಿ ಇದೆ. 1 ಲಕ್ಷ್ಯಂ. 2 ಜನಮೆ. 3 ಹರಿದು. 4 ಕ್ಕವಳವ್ಯಮನಕ್ಕವಳಂ ಬವಚೆ, ಕ್ಕವಳಂಬನಮಪ್ಪದಂತ್ತವಳಂಪಚ. 5 ಮಣಿಂ. 6 ವದಱ. 7 ಲಿತ್ತಂ. 8 ವಾಹಂಗಳಂ. 9 ಕಳರಿ.

ವೃ ॥ ಖಗತ[1]ತಿ ಸಾರ ಶಾ[2]ಕಿನಿಯರಾರ ನಿಶಾಚರಕೋಟಿ ಪಾರೆ ಬ।
ಳಗಳೆಡೆಯಾಡೆ ಭೂತಗಣಮಾಡೆ ಮರುಳ್ವಡೆ ಪಾಡೆ ಸಾಹಸಂ ॥
ನೆಗಳ್ದಿ ಮುಕುಂದನಸ್ತ್ರರಿಪುವೃಂದನ[3]ಗುರ್ವಿಸೆ ಕೊಂದನಾಜಿಗ ।
ಜ್ಜಗನೆನೆ ಚಕ್ರವರ್ತ್ತಿಯನನಿಂದಿತಕೀರ್ತ್ತಿಯನಿಂದ್ರಮೂರ್ತ್ತಿಯಂ ॥ 559

ಸೂತ್ರಂ ॥ 132 ॥

ಬೆರಸಿರೆ ಶ[4]ಷಸಹವರ್ಣ್ನಂ ।
ಸರೇಫಸಂಯೋಗಮೊಂದಿ ಕೂಡಿದ[5] ವರ್ಗ್ಗ ॥
ಕ್ಷರಮಲ್ಲಿಗಲ್ಲಿಗೆಡೆಗೊಂ ।
ಡಿರೆ ಪ[6]ರುಷಾನಾಮವೃತ್ತಿ ವರ್ತ್ತಿಕುಮದಱೊಳ್ ॥ 560

ಲಕ್ಷ್ಯಂ ॥

ಕಂ ॥ ಶಿಖಿಬರ್ಹಂ ಸರ್ಷಪಮಾ ।
ಜಖುರಂ ರಾಮಠಮಹೀಂದ್ರನಿರ್ಮ್ಮೋಕಂ ಶ್ವೇ ॥
ತಖರಾಂಗಲೋಮಮಿವು ದು ।
ರ್ಮ್ಮುಖದುಷ್ಟಗ್ರಹವಿನಾಶ[7]ನಂ ಕಟುಧೂಪಂ ॥ 561

ಸೂತ್ರಂ ॥ 133 ॥

ತಂತಮ್ಮ ವರ್ಗ್ಗದಂತ್ಯದೊ ।
ಳಂತಾವರ್ಗ್ಗಂಗಳಮಳ್ಳಾಗಿರೆ ಮೇಣ ॥
ತ್ಯಂತ[8]ಸ್ವರೂಪಸಂಯೋ ।
ಗಾಂತರಮಮದೋದವೆ ಮಧುರೆಯೆಂಬುದ[9]ದಕ್ಕುಂ ॥ 562

ಉದಾಹರಣೆ ॥

ಕಂ ॥ ಬಸಗೆಮರುಳೊರ್ಗ್ಗಂಪಾಡುವ ।
ವಸುಧಾಧಿಪನಂತಪುರದ ಕಾಂತೆಯರ ಸಮು ॥
ಲ್ಲಸಿತಪದಕಮಲದೊಳ್ ರಂ ।
ಜಿಸಿದು[10]ದು ಸಿಂಜಾನಮಂಜುಮಂಜೀರರವಂ ॥ 563

ಉಪನಾಗರಿಕೆಯೆಂದೊಡಮಿದುವೆ ॥

ಸೂತ್ರಂ ॥ 134 ॥

ಅವಿಶೇಷವರ್ಣ್ನರಚನಾ ।
ವಿವಿಕ್ತಗತಿ ಮುಕ್ತಭೂರಿಸಂಯೋಗಂ ಸಾ ॥
ಷ್ಟವಗುಣಸಮನ್ವಿತಂ ಲಲಿ ।
ತವೃತ್ತಿಯಿಂ ಲ[11]ಲಿತೆಯೆಂಬ ವೃತ್ತಿಯುದಕ್ಕುಂ ॥ 564

1 ಯತಿ. 2 ಶಾಕಿನಿ. 3 ಮಗುವಿಗೆ. 4 ಶಷವರ್ಣ್ನಂಗಳ್. 5 ಯ.ವರ್ಗ. 6 ಪುರುಷಾ. 7 ಶಕಂ. 8 ಶಂಸರೇಫ. 9 ದುಮುಕ್ಕಂ. 10 ಮಡಿತು. 11 ಲಲಿತವೃತ್ತಿಯೆಂಬುದಕ್ಕುಂ.

ಪ್ರಯೋಗಂ ॥

ಕಂ ॥ ಮದನನೃಪಾದೇಶದಿನ ।
ಲ್ಲದೆ ಬಿರಯಿಗಳಂತೆ ಪೋ ಪುಗಲ್ ಪುಗಲೆಂಬಂ ॥
ತೊದವಿದುದು ಬನದೊಳೆತ್ತಂ ।
ಮದಕಳಕಳಕಂಠಕಳಕಳಪ್ರಧ್ವಾನಂ ॥ 565

ಗ್ರಾಮೆಯೆಂಬುದುವಿದುವೆ ॥

## ಸೂತ್ರಂ ॥ 135 ॥

ಸ್ಥಾ[1]ನಂ ಕ್ರಿಯೆಯೆಯೆಂಬಿವಱೊಳ ।
ನೂನಸಮಾನಾಕ್ಷರಾದಿಪದಸಾನ್ನಿಧ್ಯಂ ॥
ತಾನಕ್ಕುಂ ಮಾಧುರ್ಯ್ಯಾ ।
ಧೀನಮನುಪ್ರಾಸಮೆಂದು ಪೇೞ್ವರ್ ಕೆಲಬರ್ ॥ 566

ಲಕ್ಷ್ಯಂ ॥

ಕಂ ॥ ಎಳಲತೆಯ ಜೊಂಪದೊ[2]ಳ್ ತ ।
ಳ್ತಳಸಿ ತಗುಳ್ದಿರ್ಪ್ಪ ವಿರಹಕಾತರದಿಂ ಕ ॥
ಣ್ಗೊಳಿಸುಗುವಾಪುರವರಮುಂ ।
ಬಳಸಿದ ನಂದನವನಂಗಳೆನಿತೊಳವನಿತುಂ ॥ 567

## ಸೂತ್ರಂ ॥ 136 ॥

ಏನಾನುಮನೊಂದಂ ಸಂ ।
ಸ್ಥಾನದಿನನುಕರಿಸುವಂತು ಭಂಗ್ಯಂತರದಿಂ ॥
ಪೀನವೊಡಂಬಡೆ ವಿರಚಿಸೆ ।
ನಾನಾವಿಚ್ಛಿತ್ತಿ ಚಿತ್ರಮೆನಿಕುಂ ಪೆಸರಿಂ ॥ 568

## ಸೂತ್ರಂ ॥ 137 ॥

* ಶರಶೂಲಚಾಪಚಕ್ರಾ ।
ಸಿರೂಪವಿಭರಥತುರಂಗಪದಗತಪಾದಂ ॥
ಮುರಜಂ ಗೋಮೂತ್ರಿಕೆ ಪು ।
ಷ್ಕರಮರ್ದ್ಧಭ್ರಮಣಸರ್ವ್ವತೋಭದ್ರಂಗಳ್ ॥ 569

---

1 ಸ್ಥಾನಕ್ರಿಯೆ. 2 ದೊಳಗು । ಳ್ಳಳಸಿ. * ಈ ಬಂಧಗಳಿಗೆ ಉದಾಹರಣವಾಗಿ ಕೊಟ್ಟಿರುವ ಪದ್ಯಗಳಲ್ಲಿ ಹಲವು ನಮಗೆ ದೊರೆತಿರುವ ನ್ಯಾಸಗಳಿಗೆ ಹೊಂದಿಕೆಯಾಗಿಲ್ಲ. ನ್ಯಾಸಗಳಲ್ಲಿಯೂ ಮತಭೇದವಿರಬಹುದೆಂದು ತೋರುತ್ತದೆ.

## ಸೂತ್ರಂ ॥ 138 ॥

ಅಕ್ಷರಬಿಂದುಚ್ಯುತಕಂ[1]।
ದ್ವ್ಯಕ್ಷರಿಯೇಕಾಕ್ಷರಂ ನಿರೋಷ್ಠ್ಯಮತಾಲ ॥
ವ್ಯಾಕ್ಷರಮೆನೆ ನಿಜನಾಮ ।
ಸದೃಕ್ಷಂ ಲಕ್ಷಣಮುದಾಗೆ ನೆಗೞ್ಗುಂ ಪಲವುಂ ॥ 570

ಅವಕ್ಕನುಕ್ರಮಪ್ರಯೋಗಂ ॥

ಶರಂ ॥

ಶ್ಲೋ॥ ಸುಂದರಾಕಾರಸಂಪನ್ನ ।
ನೆಂದುವೀನ್ನೃಪನಂದನಂ ॥
ನಂದನಂ ಬುಧಕೀರಾಳಿ ।
ವೃಂದಕ್ಕೆ ಸಕಲತುರ್ತಕಂ ॥ 571

ಶೂಲಂ ॥

ಶ್ಲೋ॥ ವೀರಶ್ರೀಕಾಂತೆಯುಂ ತಾ[2]ಳ ।
ಚರಾಚರಜನಸ್ತುತಾ ॥
ತಾರತಾತಾರತಾರೇಶ ।
ಕ[3]ರೇತಾರಾಜಿತಾಜಿರಾ ॥ 572

ಚಾಪಂ ॥

ಕಂ ॥ ಸಂಸಾರವಿಷಮವಾರಿಧಿ ।
ಸಂಸರ್ಪಣದುಃಖವೀಚಿಯೊ[ಂದು]ಲ್ಲಾಸಂ ॥
ಸಂಸಕ್ತಮಾಗದಂತು ಜಿ ।
ನಂ ಸುವ್ರತನಾ[4]ಮನೆಮಗೆ ಕರುಣಿಸುಗಿ[5]ನಿಸಂ ॥ 573

ಚಕ್ರಂ ॥

ಶ್ಲೋ॥ ತನ್ನಸಂತತಿ ಮುನ್ನೀತಃ ।
ತ[6]ನ್ನೀತಂ ಮುನಿಸನ್ನುತಂ ॥
ತನ್ನನುಕಿ ಗನೊಳಿನ್ನಾತಂ ।
ತನ್ನೊಳಿಂದಿನಿಸ[7]ನ್ನತಂ ॥ 574

ಖಡ್ಗಂ ॥

ಶ್ಲೋ॥ ಕಂಸಾಸುರಹರಂ ದೈತ್ಯ ।
ಧ್ವಂಸಿ ಬಾಣಮದಾಪಹಂ ॥
ಹಂಸಾಸನಸಮಾರಬ್ಧ ।
ಶಂಸನಂ ನರಕಾಂತಕಂ ॥ 575

---

1 ಸಂ । ಧ್ವ್ಯಕ್ಷರಬೇಕಾಕ್ಷರಂ. 2 ನಾಳ್. 3 ಕರ್ಗರಾಜಿತರಾಜಿತಾ, ಕರೇತಾರಾಜಿರಾಜಿತಾ. 4 ನಾಕ. 5 ಗಿನ್ನೆಸಂ.
6 ಮುನ್ನೀತಂ, 7 ಸನ್ನುತಂ.

ಶ್ಲೋ॥ ಕಂಜನಾಭಂ ಸುರದ್ರೋ[1]ಹಿ ।
ಭಂಜನಂ ಲೋಕಪಾಲಕಂ ॥
ಕಂಜಾಕ್ಷಂ ಕಂಟಕಾಕಂಪಂ ।
ಮುಂಜಕೇಶಿ ಧರಾಧರಂ ॥ 576

ಗಜರಥತುರಂಗಪದಗತಪಾದಂಗಳ್ಗಂ ಲಕ್ಷ್ಯಮಂ ನೋಡಿಕೊಳ್ವುದು ॥

ಮುರಜಂ॥

ಶ್ಲೋ॥ ಅಜಾತಶಂಖಂ ತಾನಾಪ್ತ ।
ನಜಂಗಮನಸೂಯನಂ ॥
ಗಜಾಂಕುಶಂ ಗತಾಪ್ರಾಪ್ತ ।
ವಿಜಯಂ ಮಧುಸೂದನಂ ॥ 577

ಮುರಜಂ ಅರ್ಧ್ದಪ್ರಸ್ತಾರದಿಂ ಗೋಮೂತ್ರಿಕೆಯುಕ್ತಂ॥

ಗೋಮೂತ್ರಿಕೆ ॥

ಕಂ॥ ಉರುತರಸಿತಕೀರ್ತ್ತಿಗುಣಾ ।
ಕರಂ ಪದಾನತವಿರೋಧಿವರ್ಗ್ಗಂ ನೆಗಟ್ದಂ॥
ಸುರುಚಿರನುತಮೂರ್ತ್ತಿ ಘೃಣಾ ।
ಪರಂ ಸದಾಹಿತಕರೋಕ್ತಿ ದುರ್ಗ್ಗಂ ಜಗದೊಳ್ ॥ 578

ಪದ್ಮಂ॥

ಶ್ಲೋ॥ ಮಂ[2]ದರಾಗಂ ಗುಣೋದ್ದಾಮಂ ।
ವಂದಿತಂ ಸ[3]ದಯಾದಮಂ ॥
ಮಂದರಾದ್ರಿನಿಭಂ ಧೀಮಂ ।
ಮಂ[4]ದಿಯೊಳ್ ಪೇಟ್ಗುಮಾಮುಮಂ ॥ 579

ಅರ್ಧ್ಧಭ್ರಮಣಂ॥

ಶ್ಲೋ॥ ಶ್ರೀರಾಮಾಧಾಮನಾಮಂ ತಾ[5] ।
ರಾರಾರಾಃಸಮಾಸಮಂ ॥
ಮಾರಾರಿ ನಿನ್ನೊಳ್ ಸಮಾನಾ ।
ಧಾರಾ ನಿ[6]ನ್ನಾತನೊಳ್ ಸಮಂ ॥ 580

* ಸರ್ವ್ವತೋಭದ್ರಕಂ ಲಕ್ಷ್ಯಮನಱಿದುಕೊಳ್ವುದು ॥

---

1 ದ್ರೋಹ. 2 ಮಂದಾರಾಗಂ, ಮಂದಾರಾಂಗಂ, ಮಂದಾರಗಂ. 3 ಸ್ಕಂದಯಾರವಂ, ಸ್ಕಂದಯಾಪರಂ, ಸಂದರ್ಗ-ದಮಂ. 4 ಮಂದೆ. 5 ತಾಂ. 6 ನಿನ್ನೀತ. * ಇದಕ್ಕೆ ಹಿಂದೆ—ಕುಸುಮಮನೋಹರಂ । ಕುಸುಮಮನೋಹರಂ । ಕುಸುಮಮನೋಹರಂ । ಕುಸುಮಮನೋಹರಂ ॥—ಎಂದು ಎರಡು ಪ್ರತಿಗಳಲ್ಲಿ ಬರೆದಿದೆ.

ಅಕ್ಷರಚ್ಯುತಕಂ ॥

ಕಂ ॥ ಕುಲಜನಭಿಮಾನಿ ತಕ್ಕಂ ।
ಚಲಮಱಿವಂ ನೆಗೞನಾತನಿಂತಿದನೆಂತುಂ ॥
ಜಲಜಾಯುತಾಕ್ಷಿ ಕೆಲನುಂ ।
ನೆಲನುಂ ನಗುವಂತು ಪೊ[1]ಲ್ಲಕೆಯ್ದುದೆ ಚೋರಂ ॥ 581

ಬಿಂದುಚ್ಯುತಕಂ ॥

ಶ್ಲೋ ॥ ಇಂದು ನೋಡಿದು ಬೇೞಿಂದ ।
ಮೆಂದಿನಂದವುದಲ್ತಣಂ ॥
ಮಂದಮಂದಂ ಕರಸ್ಪರ್ಶಂ ।
ತಂದಪ್ಪುದುಪತಾಪಮಂ ॥ 582

ದ್ವ್ಯಕ್ಷರಿ ॥

ಶ್ಲೋ ॥ ನಿಂದಾನಂದದದೊಂದೂನಂ ।
ನಿಂದಂದೇನಿಂದಿನಂದದಿಂ ॥
ನಂದನಂದನ ನಿನ್ನಿಂದಂ ।
ನಂ[2]ದನುಂ ದನುನಂದನಂ ॥ 583

ಏಕಾಕ್ಷರಂ ॥

ಶ್ಲೋ ॥ ನಿನ್ನಿ ನೇನಿನ್ನ ನಾನನ್ನ ।
ನಿನ್ನ ನೆನ್ನ ನನೂನನಂ ॥
ನುನ್ನ ನೈನನ್ನ ನೈನೇನೇ ।
ನೆ[3]ನ್ನಿನ್ನಂನಿನ್ನೆ ನಾನುನಂ ॥ 584

*ನಿರೋಷ್ಠ್ಯಂ ॥

ಕಂ ॥ ನೆಗೞ್ದಿರೆ ಯು[4]ತಿಸ್ಥಿತಿ ಚಿತ್ತದಿ ।
ನಗಲೆ ಕರಂ ನಿಜದೆ ತನ್ನ ತ[5]ರಳತೆ ಕೆಲದಿಂ ॥
ದಗಲದೆ ನಾಳೀಜಂಘೆಂ ।
ನಗಿಸಿತ್ತಾನಗದ ನಗದ ಖುಷಿಸಂ[6]ಹತಿಯಂ ॥ 585

ಅತಾಲವ್ಯಂ ॥

ಶ್ಲೋ ॥ ರೂಪುಂ ಸೊಬಗುಮೊಳ್ಮಂ ನಾ ।
ಣ್ಣಾಪುಮಾಪ್ಪೂರ್ಗಂ ಪ್ರಭುತ್ವಮುಂ ॥
[7]ಕೋಪಮಂ ಮಾಱ್ಪುದುಂ ತನ್ನೊಳ್ ।
ಭೂಪಂ ತಾಂ ಕೊಲ್ವು ಮಾತನಂ ॥ 586

1 ಪೊಲ್ಲಗೆಯ್ದುದೀಚೋರಂ. 2 ನಂದನಂ, ನ ದನಂ. 3 ನೇನಿನ್ನಂ. * ಇದಕ್ಕೆ ಹಿಂದೆ ಒಂದುಪ್ರತಿಯಲ್ಲಿಮಾತ್ರ " ನೀನಾನುನಿನ್ನನಾನೆಂ । ನಾನಿಂನನ್ನಿನ್ನ ನಿನ್ನನಾನಾನನೂನಂ ॥ ನೂನಂನನ್ನೆನನೆನೋನ್ನೈ । ನೀನೇನ್ನೈನಾನಾನೀನನಾನೀನೇನೇನೋನ್ನೈ " ಎಂಬ ಕಂದಪದ್ಯವು ದೊರೆಯುತ್ತದೆ. 4 ಯುತಿ. 5 ಪರಳತೆ. 6 ಸಂತತಿ. 7 ಕೋಪಮುಂ ಮಾಳ್ಪುದುಂ.

## ಸೂತ್ರಂ ॥ 139 ॥

ಚ್ಯುತದತ್ತಾಕ್ಷರಮುಮಂ ಗೋ।
ಪಿತಕ್ರಿಯಾಕಾರಕಂ ನಿಗೂಢಚತುರ್ತ್ಥಂ ॥
ಪ್ರತಿನಿಯತಗತಪ್ರತ್ಯಾ।
ಗತಂ ದಲೆಂದಿಂತು ಪೆಱವುಮುಕ್ಕುಂ ಚಿತ್ರಂ ॥ 587

ಪ್ರಯೋಗಂ ॥

ಚ್ಯುತದತ್ತಾಕ್ಷರಂ ॥

ಶ್ಲೋ॥ ಸೀತಾರಾಮಸಮೀಪಸ್ಥಂ ।
ಧೌತಶೀ[1]ಲಸಿತಪ್ರಭಂ ॥
ವೀತತ್ರಾಸಂ ಮನಂಗೊಳ್ಗುಂ ।
ಪ್ರೀತಿಯಿಂದೊಂದಿ ಲ[2]ಕ್ಷಣಂ ॥ 588

ಕ್ರಿಯಾಕಾರಕಗೋಪಂಗಳ್ ॥

ಕಂ ॥ ಪರಿವರ್ಜ್ಜಿತದೋಷನನಾ ।
ದರದಿಂ ದೇವಾದಿದೇವನೆಂದಿ[3]ರದರೆಬರ ॥
ದುರಘಾವಿಲಿಪ್ತರಂ ದೇ ।
ವರೆಂದು ಬಗೆ ಬೆದಱೆ ದೆಸೆಗೆ ದಿಙ್ಮೂಢತೆಯಿಂ ॥ 589

ಶ್ಲೋ॥ ಏನನೇನಂ ಮಹಾಘೋರಂ ।
ನಾನಾಜನ್ಮಾಂತರಂಗಳೊಳ್ ॥
ತಾನಾಗಿಸದು ಸಂಸಾರಿ ।
ಗಾನಿರ್ವ್ವಾಣಪದಂಬರಂ ॥ 590

ಗೂಢಚತುರ್ತ್ಥಂ ॥

ಶ್ಲೋ॥ ಆತನಲ್ಲದನಂ ಮೆಚ್ಚಂ ।
ಮಾತೇಂ ತಾಂ ಮಾರನಾದೊಡಂ ॥
ಕೇತನಂ ರತಿರಾಗಕ್ಕೆ ।
ಕೇತನಂ ತಾರ ನಲ್ಲನಂ ॥ 591

ಗತಪ್ರತ್ಯಾಗತಂ ॥

ಶ್ಲೋ॥*ತಾರವೀವೀರತಾಸಾರ ।
ನೀರಸಾಕಾರನಾರಕಾ ॥
ತಾರನಾನಾರತಾಕಾರ ।
ಕಾರತಾತಾರಕಾ ·· ॥ 592

1 ಶೀಲಂ ಶಿತ. 2 ಲಕ್ಷ್ಮಣಂ. 3 ದಿಂದರೆಬರ. * ಈ ಶ್ಲೋಕದಲ್ಲಿ ತಪ್ಪು ಬಿದ್ದಿರುವಹಾಗೆ ತೋರುತ್ತದೆ.

ಸೂತ್ರಂ ॥ 140 ॥

ಸುಕವಿಪ್ರಕರಕ್ಕೆ ವಿನೋ ।
ದಕೇಳಿಗುಪಯೋಗಹೇತುಗಳ್ ಪ್ರಚ್ಛನ್ನ ॥
ಪ್ರಕಟಾರ್ತ್ಥಂಗಳನೇಕ ।
ಪ್ರಕಾರದಿಂದೊಂದಿ ವರ್ತ್ತಿಕುಂ ಪೇಳಿಕೆಗಳ್ ॥ 593

ಸೂತ್ರಂ ॥ 141 ॥

ನುಸುಳೊನ್ನರ್ಗಡಿ ಭಾ[1]ವೆ ಮನ ।
ಕ್ಕೆಸೆವಸ್ಪಷ್ಟಾರ್ತ್ಥವಱಿವು ನಾಮಾಂತರಿತಂ ॥
ಕು[2]ಸುರಿಯ ನುಡಿಯೆಂಬಿವು ಭಾ ।
ವಿಸೆ ಪೇಳಿಕೆಗಳೊಳ್ ಪೇೞ್ವ ಭೇದಮನಕ್ಕುಂ ॥ 594

ಲಕ್ಷ್ಯಂ ॥
ನುಸುಳ್ಗೆ ॥
ಕಂ ॥ ತಿೞವುದು ಕೈಕಂಗೊಳ್ಳದು ।
ಮೊರೆವುದು ಮಱಿದುಂಬಿಯಲ್ತು ಕ[3]ತ್ತರಿಗಾಳಂ ॥
ಬೆ[4]ರಸಿ ತ[5]ನುಗೊಂದಿ ದೊರೆಕೊಂ ।
ಡಿರೆಯುಂ ಕೆಸಱಂಕಮಲ್ಲಿದಾವುದೊ ಪೇೞಿಂ ॥ 595

ಒನ್ನರ್ಗಡಿಗೆ ॥
ಕಂ ॥ ಒಂ[6]ದು ಗೞಿಗೆಯೊಳ್ ಸಂಪುಟ ॥
ದಂದದೆ ಮಡಿದಿರ್ಪ್ಪರಹಿತರೆರೆದ ನರಕ್ಕೋರ್ಗಂ ॥
ಡೊಂದಱೊಳ್ ಮೆಱೆದು ಗಣಪತಿ ।
ಯಂದದಿನೊಸೆದಿರ್ಪ್ಪರದಿರ್ಗೆ ಮಂ[7]ದಿಂದರನಾ ॥ 596

ಭಾವೆಗೆ ॥
ಶ್ಲೋ ॥ ಈನವೀನಸಿ[8]ತಾಂಭೋಜಾ ।
ನೂನಪೀತಾವತಂಸಕಂ ॥
ತಾನದೇವುದೊ ಕ[9]ಣ್ಣಾರ್ಗಂತ ।
ವ್ಯಾನತಾಯುತಲೋಚನೇ ॥ 597

ಅಸ್ಪಷ್ಟಾರ್ತ್ಥಕ್ಕೆ ॥
ವೃ ॥ ದಂಡಿತಾರಾತಿಭೂಭೃ ।
ತ್ಕಾಂಡಂ ಮೆಚ್ಚಿದಂ ಕ[10]ರಂ ॥
ಗಾಂಡೀವಧ[11]ನ್ವಂ ಮುಂದೆ ।
ಕಂಡಂ ಭಯಾಕರವಂ ॥ 598

1 ಭಾವ್ಯಮನ. 2 ಕುಸುರಿ. 3 ಕತ್ತರಿಘಾಯುಂ. 4 ಬೆರಸು. 5 ತನಗೊಂದಿ, ತಮಗೊಂದಿ. 6 ಒಂದೆ. 7 ಮಂದಿಂದಿರನೊಳ್. 8 ರಸಾಂಭೋಜಾ. 9 ಕಣ್ಣಾರ್ಗಸ। ದ್ಯಾನತಾ. 10 ನರಂ. 11 ಧನ್ವನಂ, ಧನ್ವಂತ, ಧನ್ವಕಂ, ಧನ್ವಂತಾ.

ಉಱುವಿಂಗೆ ॥

ಕಂ ॥ ಉಮೆಗೆ ಮಹೀಜೆಗೆ ಸು[1]ಮನೋ ।
ರಮಣಿ[ಮಣಿ] ನಚ್ಚಿನಾತಿಳೋತ್ತಮೆಗೊಳ್ಪಿಂ ॥
ಸಮನೆನಿಸುವ ಮಂದಾಕಿನಿ ।
ಯಮುನಾನದಿಸಿಂಧುಸಂಕರಂ ಕಣ್ಗೆಸೆಗುಂ ॥ 599

ನಾಮಾಂತರಿತಕ್ಕೆ ॥

ಕಂ ॥ ಮೊದಲೊಳ್ ವಿಕಾರಿ ನಾಕಾ ।
ರದರ್ಶನೀಯಂ ವಿರಾಮದೊಳ್ ಸಾಯಕಮಂ ॥
ತದು ತಾಂ ವಿನಿಂದ್ಯಮಲ್ತು ।
ದಿದೇವಪುತ್ರಂ ಸದಾನವಾರಿಪ್ರಮುಖಂ ॥ 600

ಕು[2]ಸುರಿ ಮೊದಲಾದ ಪ್ರಶ್ನೋತ್ತರಪ್ರಕಾರಂಗಳ್ಗಮಿಲ್ಲಿ ಪ್ರಯೋಗಮಂ ಕಂಡುಕೊಳ್ವುದು॥

ಸೂತ್ರಂ ॥ 142 ॥

ನು[3]ಡಿದುದದೆ ಪದವಿ[4]ಭಂಗತೆ ।
ಗೊಡಂಬಡಂ ಪಡೆಯೆ ಮಗುಳ್ದುಮತ್ಯಾರ್ಥಾಂತರದೊಳ್ ॥
ತೊಡರ್ದುದ ನಿಲೆ ನುಡಿವ ನುಡಿ ಚೆ ।
ಲ್ವೊಡರಿಪ ವಕ್ರೋಕ್ತಿ ನಿಯತಕಾಕುಶ್ಲೇಷಂ ॥ 601

ಪ್ರಯೋಗಂ ॥

ಕಂ ॥ ಮು[5]ತ್ತೈಯ್ಯ ಚದುರೆದೇನೆನೆ ।
ಮುತ್ತಲ್ಲದುದುಂಟೆ ಮಸ್ತು ಪೆಱತೆನೆ ಸತಿ ನೀ[6] ॥
ಮಿತ್ತಿರಿಮೆನೆ ಕರಮೊಳ್ಳಿ ।
ತ್ತಿತ್ತಾಗಡೆ ನಿಮ್ಮೊಳಿರ್ಪ್ಪೆವೆನೆ ವೃದ್ಧವಿಟಂ ॥ 602

ಮುನ್ನಿನ ಕಡನಂ ನೀಂ ಕುಡು ।
ಮುನ್ನಿಲ್ಲದ ಕಡನನೆಂತು ಪಿಡಿಯೆಂದೀವೆಂ ॥
ನಿ[7]ನ್ನೀಪಿಡಿಯೆನೆ ಕುಡುಕಡ ।
ನೆನ್ನಂ ಪಿಡಿಯುಳ್ಳೊಡಾನೆಯಿಾಯೆನೆ ಕೆನ್ನಂ ॥ 603

ಕಾಕುವಕ್ರೋಕ್ತಿಗೆ ॥

ಕಂ ॥ ದಾರುಣಮಂ ಶರಶಲ್ಯಮು ।
ನೋರಂತಿರೆ ಪುಣ್ಣೊಳು[8]ಡಿದು ಬಿಡದುಳ್ಕುವು[9]ದಂ ॥
ಸೈರಿಸುವರುಮೊಳರೆ ಕೆಲರ್ ।
ಸೈರಿಸುವರುಮೊಳರೆ ಖಳರ ಕಟುಕೋಕ್ತಿಗಳಂ ॥ 604

ಇದು ಗುಣವಿವೇಕದೊಳ್ ಶಬ್ದಾಲಂಕಾರನಿರ್ಣ್ಣಯಪ್ರಕರಣಂ
ದ್ವಿತೀಯಂ.

---

1 ಮಣಿಯೆಗೆ । ರಮಣಿನಚ್ಚಿನಾ. 2 ಪೆಚ್ಚಂ ॥ ಕುಸುರಿ. 3 ನುಡಿದುದನೆ, ನುಡಿದುದನೆ. 4 ವಿಘಂಗದಿ।ನೊಡಂಬಡಂ. 5 ಮುತ್ತೈರೇವುದು ಚದುರೆಗೆ. 6 ಕಂ ॥ ತ್ತಿರಿರಿಯನೆ. 7 ನಿನ್ನಿಂಟು. 8 ಳಿದು. 9 ವುದಂ.

## ಅರ್ತ್ಥಾಲಂಕಾರಪ್ರಕರಣಂ.

### ಸೂತ್ರಂ ॥ 143 ॥

ಪ್ರವರಾರ್ತ್ಥಾಲಂಕಾರಂ ।
ಅರ್ತ್ಥಾಲಂಕಾರ ವಿವಿಧವಿಕಲ್ಪಪ್ರಪಂಚಿತಂ ಕ್ರಮದಿಂ ವಾ ॥
ಭಾಗಂಗಳ್. ಸ್ತವಮುಪಮೆಯುತಿಶಯಂ ಶ್ಲೇ[1] ।
ಷವೆಂದು ನಾಲ್ಕುಂ ಪ್ರಕಾರದಿಂ ನೆಱೆದಿರ್ಕ್ಕುಂ ॥ 605
ವತ್ತಮಲ್ಲಿ ॥

### ಸೂತ್ರಂ ॥ 144 ॥

ವಸ್ತುಸ್ವಭಾವಕಥನಂ ।
ವಾಸ್ತವಮುಪಮಾದ್ಯಶೇಷವಕ್ರೋಕ್ತಿವಿಪ ॥
ವಾಸ್ತವಂ. ರ್ಯ್ಯಸ್ತಂ ಸಮಸ್ತಲೋಕಮ ।
ನಸ್ತೋಭನಕಾರಿ ಚಾರುತರಪುರುಷಾರ್ತ್ಥಂ ॥ 606

### ಸೂತ್ರಂ ॥ 145 ॥

ವೃ ॥ ಜಾತಿಸಹೋಕ್ತಿಭಾವಪರಿವೃತ್ತಿಯಥಾಕ್ರಮಪರ್ಯ್ಯಾಯಾವಳೀ ।
ವಾಸ್ತವ ಹೇತುಸಮುಚ್ಚಯಾನುಮಿತಿಸೂಕ್ಷ್ಮಲವವ್ಯತಿರೇಕದೀಪಕಾ ॥
ಭೇದಂಗಳ್. ಖ್ಯಾತಿಸಮಾಹಿತಾವೃತಿಪರಸ್ಪರಸಾರನಿಮೀಲನಂಗಳುಂ ।
ದೀ[2]ತೆಱದಿಂದಮೊಂ[3]ದಿ ನೆಗೞ್ಗುಂ ನೆ[4]ಱೆ ವಾಸ್ತವಭೇದವೃತ್ತಿಗಳ್ ॥ 607

### ಸೂತ್ರಂ ॥ 146 ॥

ಜಾತಿಯೆನಿಕುಂ ಸ್ವಭಾವಾ ।
ಖ್ಯಾತಿ ಯಥಾವಸ್ಥಿತಾರ್ತ್ಥವಿಷಯಾರ್ತ್ಥಕೃತೋ ॥
ಜಾತಿ. ದ್ಯೋತನಮವೈಪರೀತ್ಯಂ ।
ಜಾತಿದ್ರವ್ಯಕ್ರಿಯಾಗುಣಪ್ರತಿಬ[6]ದ್ಧಂ ॥ 608

ಲಕ್ಷ್ಯಂ ॥
ಜಾತಿಸ್ವಭಾವಾಖ್ಯಾನಕ್ಕೆ ॥

ವೃ ॥ ಸೊಗಯಿಸಿ ತೋರ್ಪ್ಪ ಸೋಗೆ ಕೊರಲೊಳ್ ಪೊಗರ್ವಟ್ಟಿಸೆದಿರ್ಪ್ಪ ಕರ್ಪ್ಪುಕೆ ।
ಯ್ಮೆಗೆ ಕಡೆಗಣ್ಗಳೊಳ್ ಪೊಳೆವ ಪೆಳ್ಪು ಶಿಖಾಗ್ರದೊಳೊಂದಿದೊಳ್ಪು ಮೆ॥
ಲ್ದೊಗೆದಿರೆ ಕೇಗುವಿಂಚರದ ಸುಣ್ಪು ಮನಂಗೊಳೆ ಚೆಲ್ವನಾಳ್ದುದೀ ।
ನಗವನರಾಜಿಯೊಳ್ ಸುೞಿಯುತಿರ್ಪ್ಪ ವಿಚಿತ್ರಶಿಖಂಡಿಮಂಡಲಂ ॥ 609

---

1 ಶ್ಲಿ । ಷ್ಟ. 2 ಬೀತಱ. 3 ಮಿಂಕು. 4 ಸಲೆ. 5 ಡೊಳ್. 6 ಬಂಧಂ.

ದ್ರವ್ಯಸ್ವಭಾವಾಖ್ಯಾನಕ್ಕೆ ॥

ಕಂ॥ ಕಱೆ ಕೊರಲೊಳ್ ಕಣ್ ನೊಸಲೊಳ್ ।
ಪೆಱೆ ಮಕುಟದೊಳಹಿವಿಭೂಷಣಾ[1]ವಳಿ ತೋಳ್ಗಳೊಳ್ ॥
ನೆಱೆದಿರೆ ಕರಮೆಸೆದಂ ಪಲ ।
ತೆಱದ ಮರುಳ್ವಡೆಯ ನಡುವುಮಾಪತಿರುದ್ರಂ ॥ 610

ಕ್ರಿಯಾಸ್ವಭಾವಾಖ್ಯಾನಕ್ಕೆ ॥

ವೃ ॥ ವಳಿಗಳಱಿಯೆ ಬಿಂಕಂಪೆತ್ತ ವೃತ್ತಸ್ತನಂ ಕ ।
ಣ್ಗೊಳಿಸೆ ತೊಳಗೆ ಬಾಹಾಮೂಲಮೂರುದ್ವಯಂ ಸಂ॥
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್ ।
ಪೊಳೆಯೆ ಮಿಳಿರ್ವ ಕೊಂಬಂ ನಿಳ್ಕಿ ಪೂಗೊಯ್ದಳೊರ್ವಳ್ ॥ 611

ಗುಣಸ್ವಭಾವಾಖ್ಯಾನಕ್ಕೆ ॥

ಕಂ ॥ ಮನದೊಳ್ ಮುದಮಂ ಕೋಮಳ ।
ತನುವಿನೊಳ್[2]ತ್ಯಂತರೋಮಹರ್ಷಣಮಂ ಕ ॥
ಣ್ಗಿನಿಸಿನಿಸು[3]ಮೀಳನಮಂ ।
ಜನಿಯಿಸುತುಂ ಪ್ರಿ[4]ಯೆಯಸೊಂಕು ಪಡೆದುದಲಂಪಂ ॥ 612

## ಸೂತ್ರಂ ॥ 147 ॥

ಸಮಕಾಲಮಪ್ಪವೆರಡ ।
ಸಹೋಕ್ತಿ. ರ್ತ್ಥಮನೊಡನೆಯೆ ಪೇ[5]ೞ್ವುದು ಸಹೋಕ್ತಿ ವಿತರ್ಕ್ಕ ॥
ಭಾವಂ. ಕ್ರಮದಿಂದರ್ತ್ಥಾಂತರಮಂ ।
ಸಮನಿಸುವೊಂದುಕ್ತಿ ಭಾವಮೆನೆ ಪೆಸರ್ವಡೆಗುಂ ॥ 613

ಲಕ್ಷ್ಯಂ ॥

ಸಹೋಕ್ತಿಗೆ ॥

ಕಂ ॥ ಅಲರ್ದುವೊಡನೊಡನೆ ಕುವಲಯ ।
ಕುಲಮುಂ ಕುಲಟಾಮುಖಂಗಳುಂ ಮುಗಿದುವು ನಿ ॥
ಶ್ಚಲಯೋಗನಿರತಸಂಧ್ಯಾಂ ।
ಜಲಿಯುಂ ಸರಸಿರುಹವನಮುಮೊಡನೊಡನಾಗಳ್ ॥ 614

ಬಿರಯಿಗಳ ಸುಯ್ಗಳೊಡನೆಯೆ ।
ಪಿರಿಯವು ದೆವಸಂಗಳಾದುವವಱವಱ ಪರಿ ॥
ಸ್ಫುರಿತಂಗಳೊಡನೆ ಕುಂದಿದು ।
ವಿರುಳ್ಗಳುಂ ಮುಂ[6]ಚೆ ಬಂದ ಜಳದಾಗಮದೊಳ್ ॥ 615

---

1 ಗಂ ನಳಿತೋಳ್ಗಳೊಳ್. 2 ಳಂತಂತೆ. 3 ಸುನ್ಮೀಳನಮಂ. 4 ಪ್ರಿಯನ. 5 ಪೇೞುತ್ತಿರ್ಪುದು. 6 ಮುಂಚೆ.

ಭಾವಕ್ಕೆ ॥

ವೃ ॥ ಪಡುವಳ್ ಕೀೞಿಲೊಳೆಮ್ಮ ತೊೞ್ತು ಪಡುವಳ್ ಮುತ್ತಬ್ಬೆಯಾಕೋಣೆಯೊಳ್ ।
ಪಡುವಂ ಶಕ್ತಿವಿಹೀನನಂಧಬಧಿರಂ ಕೇಳಜ್ಜನೀಬಾಗಿಲೊಳ್ ॥
ಪಡುವೆಂ ಬಾ[1]ಲೆಯೆನೊರ್ವಳಿಲ್ಲಿ ಮನೆಯಾಣ್ಮಂ ಪೋದನಿಂದೂರ್ಗೆ ನೀಂ ।
ಪಡಲೆಂದೆಂತೆಡೆವೇಡುವಯ್ ಪಥಿಕ ಮತ್ತೀ ಪೊತ್ತಿನೊಳ್ ಗಾಂ[2]ಪನೇ ॥ 616

## ಸೂತ್ರಂ ॥ 148 ॥

ಒಂದಂ ಕೊಟ್ಟೊಂದಂ ಕೊ ।
ಪರಿವೃತ್ತಿ. ಳ್ವಂ[3]ದಂ ಪರಿವೃತ್ತಿಯೆಂಬುದಕ್ಕುಂ ತರದಿಂ ॥
ಯಥಾಕ್ರಮಂ. ದೊಂದಿರೆ ನಿರ್ದ್ದೇಶಸ್ಥಿತಿ ।
ಯಿಂದಂ ಪೇೞ್ವುದು ಯಥಾಕ್ರಮಂ ಮುನಿಮತದಿಂ ॥ 617

ಲಕ್ಷ್ಯಂ ॥

ಪರಿವೃತ್ತಿಗೆ ॥

ಕಂ ॥ ಬಿಳಿಯಲರ್ಗಣ್ಗಳ ಬೆಳ್ಪಂ ।
ಲಲನಾಜನವಧರವು[4]ಣಿಗೆ ಕೊಟ್ಟದಱ ಪುದುಂ ॥
ಗೊಳಿಸಿದ ಕೆಂಪಂ ನೀವ್ರ್ಮೀ ।
ಕುಳಿಯೊಳ್ ಮಾಱಡಿ ಕೊಂಡ ತೆಱದಿಂ ತೋರ್ಕುಂ ॥ 618

ಯಥಾಕ್ರಮಕ್ಕೆ ॥

ವೃ ॥ ಇದು ನಿ[5]ನ್ನಚ್ಚರಿಸಿದಿಕ್ಷುಚಾಪವಿದು ನಿನ್ನೀಲೋಕಮಂ ಕೆಯ್ಗೆ ಮಾ ।
ಡಿದ ಪುಷ್ಪಾಸ್ತ್ರವಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆ ॥
ತ್ತಿದ ಚೈ[6]ತ್ರಧ್ವಜಮೆಂದು ತೋರ್ಪ್ಪ ತೆಱದಿಂ ಭ್ರೂಲಾಸ್ಯಮಂ ನೀಳ್ದಪಾಂ ।
ಗದ ಬೆಳ್ದಿಂಗಳನೆಡ್ಡಮಪ್ಪ ಕಬರೀವಿಸ್ತಾರಮಂ ತೋಱಿದಳ್ ॥ 619

* ಅವಿಹಿತವೇ[7]ಗಮೇೞ್ಗೆಯುಜವಂ ವ್ರಣಮಕ್ಷತಕಾಯಮೆತ್ತಿ ಕ ।
ಟ್ಟುವ ಮದಮುಣ್ಮಿ ಸೋರ್ವ್ವ ಸೊನೆ ಬೀೞ್ವ ಗಜಧ್ವಜಮಂಬರಕ್ಕೆ ನಿ ॥
ಳ್ಕುವ ಜಯಕೇತು ಸಂದೆಯದ ದಂದುಗಮಂ ಕಿ[8]ಡಿಸಿತ್ತು ಮುಂದಣೋ ।
ಡುವ ರಿಪುದಂತಿಗಂ ಪೆಱಗಣಟ್ಟುವ ಱ[9]ಟ್ಟರ ಮೇರುದಂತಿಗಂ ॥ 620

ಇಲ್ಲಿ ಕೆಲರ್ ವ್ಯುತ್ಕ್ರಮಗಣನೆಯಿಂದೆ ನಿಂದಿತಕ್ರಮಮೆಂದು ಪೇೞ್ವರ್ ॥

## ಸೂತ್ರಂ ॥ 149 ॥

ನುಡಿಯದೆ ಮನದರ್ತ್ಥಮನನು ।
ಪರ್ಯಾಯಂ. ನು[10]ಡಿದಂತಿರೆ ಸು[10]ಡಿದ ನುಡಿಯೆ ಪರ್ಯ್ಯಾಯಂ ಮು ॥
ಆವಳಿ. ತ್ತುಡಕಿಲ್ಗಳೆ ಪಲವುಮನೇಂ ।
ದೆಡೆಯೊಳ್ ಸಮಗೊಳಿಸಿ ಪೇೞ್ವುದಾವಳಿ ಪೆಸರಿಂ ॥ 621

---

1 ಬಾಲಕಿ ನೊರ್ವ್ವಳ್. 2 ಗಾಂಪಿನ. 3 ಟ್ಯಂದದು. 4 ರುಚಿಗೆ 5 ನೀನ. 6 ವಿನಾ. * ಈ ಪದ್ಯಕ್ಕೆ ಬದಲು " ಏಕ [illegible] ಬಹುಳ... ಲಕ್ಷ್ಯಂ " ಎಂದು ಕೆಲವು ಪ್ರತಿಗಳಲ್ಲಿ ಇದೆ. 7 ಸೇಳ, ಶೇಳ. 8 ಬಿಡಿಸಿತ್ತು. 9 ರಟ್ಟದ. 10 ನುಡಿದ.

ಲಕ್ಷ್ಯಂ ॥

ಪರ್ಯಾಯಕ್ಕೆ ॥

ಕಂ ॥ ಬನದೊಳಗೆ ನೋ[1]ಡಿ ಪೊಸವೂ[2] ।
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ ॥
ನಿನಿತೊಂದು ಬೇ[3]ಗಮುಂ ನಿ ।
ನ್ನಿನಿಯನ ಪಕ್ಕದೊಳಿರೆಂದು ಸಖಿ ತೊಲಗುವುದುಂ ॥ 622

ಆವಳಿಗೆ ॥

ಕೊಳಗಳ ದಳಿತಾಬ್ಜಂಗಳ ।
ದಳಿತಾಬ್ಜಂಗಳ ಸಮೃದ್ಧಮಧುಗಳ ಮಧುಗಳ ॥
ಚಳದಳಿಕುಳಾಕುಳಂಗಳ ।
ವಿಳಸದಳಿಪ್ರ[4]ಕರಮಧುರವಿರುತಿಯೆ ಬನದೊಳ್ ॥ 623

ಆವಳ್ಯಪೋಹಕ್ಕೆ ॥

ಕಂ ॥ ಕಳರುತಿಯಿಲ್ಲದ ಮಧುಪಾ ।
ವಳಿ ಮಧುಕರನಿಕರಮಿಲ್ಲದಂಬುರುಹವನಂ ॥
ಜಳರುಹಮಿಲ್ಲದ ತಿಳಿಗೊಳ ।
ನಲರ್ದ ಸರಃಪ್ರ[5]ಸರಮಿಲ್ಲದೂರಿಲ್ಲದಱೊಳ್ ॥ 624

## ಸೂತ್ರಂ ॥ 150 ॥

ಹೇತುಮುದಾಖ್ಯಾನಂ ಸಹ ।
ಹೇತು. ಹೇತುಕಮದು ಹೇತುವೆಂಬಲಂಕೃತಿಯುಕ್ತಂ ॥
ಸಮುಚ್ಚಯಂ. ಮಾತೇಂ ಬಹುಸಂಕಥನಂ ।
ಜಾತಿದ್ರವ್ಯಾದಿಕಂ ಸಮುಚ್ಚಯಮು[6]ಕ್ತಂ ॥ 625

ಲಕ್ಷ್ಯಂ ॥

ಜ್ಞಾಪಕಹೇತುಗೆ ॥

ವೃ ॥ ತಿವಳಿಯೊಳ್ ಮಿಡುಕಾಡದ ಮಣ್ಣಿಂದಿಕ್ಕಿದ ಲಂಡದ ಪೆಂಕೆಯಿಂ ।
ಕವಿವ ಕೀಲ್ಮದದೊಳ್ಪೊನಲೊಳ್ ಸುಯ್ಯಾಱದ ಪೆ[7]ನ್ನೊರೆಯಿಂ ತಗು ॥
ಳ್ದವಿಹತುಂಬುವ ಬಲ್ಪೊನಲಿಂದಿರ್ಪ್ಪಾಱದ ಬಟ್ಟೆಯೊಳೊಕ್ಕ ಪ ।
ಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ ॥ 626

ಕಾರಕಹೇತುಗೆ ॥

ವೃ ॥ ಪಂದಿಯಿಂ ಕೆದಱಿದು[8]ತ್ಪಳಮುಂ ವನದಂತಿಯಿಂ ।
ನೊಂದು ಸೂಸಿದ ಸರೋಜಮುಮೊಯ್ಯನೆ ನೀರುಣಲ್ ॥
ಬಂದು ಪೋದ ಮೃಗದಗ್ರಖುರಚ್ಯುತವಾರಿಯಿಂ ।
ನಾಂದೆರಳ್ತಡಿಯುಮಿಂಬು ತದಗ್ರಿಮಭಾಗದೊಳ್ ॥ 627

1 ಪೋಗಿ. 2 ವೂ । ವಿನ. 3 ಬೇಗದಿಂ. 4 ಪ್ರತತಿ. 5 ಪ್ರಸರ. 6 ಮೆನಿಸುಂ, 7 ಪೊನ್ನೊರೆ. 8 ದುತ್ಪಳ.

ಪರಂಪರಿತಹೇತುಗೆ ॥

ವೃ ॥ ವಿನಯಮನಿತ್ತುದಿಂದ್ರಿಯಜಯಂ ವಿನಯಂ ಗುಣಸಂಪದಂಗಳಂ ।
ಜನಿಯಿಸಿದತ್ತು ಸದ್ಗುಣಗಣಂ ಪಡೆದತ್ತು ಜನಾನುರಾಗಮಂ ॥
ಜನದನುರಾಗಮಾಗಿಸಿದುದಾವಗಮಿ[1]ದ್ಧವಿಶುದ್ಧಕೀರ್ತ್ತಿಯಂ ।
ತನಗೆನೆ ರಾಜ್ಯಲಕ್ಷ್ಮಿಯುಮನನುಷ್ಠಿಸಿದಂ ನಯದಿಂ ಯುಧಿಷ್ಠಿರಂ ॥ 628

ಅಭಾವಹೇತುಗೆ ॥

ಕಂ ॥ ಅವಿನಯದಿನನಿಂದ್ರಿಯವ ।
ರ್ಗ್ಗವಿಜಯದಿ[2]ನಬುಧವಿಶಿಷ್ಟಸಂಭಾವನೆಯಿಂ ॥
ವಿವಿಧವ್ಯಸನಂಗಳ್ ಸಂ ।
ಭವಿಸುಗುಮಾರ್ಗ್ಗಂ ವಿಶಿಷ್ಟವಿದ್ವಿಷ್ಟಂಗಳ್ ॥ 629

ಸಮುಚ್ಚಯಕ್ಕೆ ॥

ವೃ ॥ ನೃಪನ ದಯೆಯುಂ ನಚ್ಚಂ ತನ್ನಣ್ಮುಮೊ[3]ರ್ಪ್ಪುದುಮಾಂತ ಭೂ ।
ಮಿಪನ ಮನದೊಂದುಕರ್ಕ್ಕಂ ನೊಕರ್ಕ್ಕಂ ಬಿಗುರ್ತ್ತಿರವುಂ ನಿಜ ॥
ದ್ವಿಪಹಯರಥಾನೀಕಾನೇಕಪ್ರಧಾನರ ಸಾವುಮಾ ।
ತಪನತನಯಂಗಾಗಳ್ ಕಾಯ್ಪಂ ನಿಮಿರ್ಚ್ಚಿದುಮಾಜಿಯೊಳ್ ॥ 630

ಕಂ ॥ ಕೃತಮಣಿವಿಭೂಷಣಂಗಳ ।
ನತಿಶಯಿಸಿದುವವರ ಕೊರಲೊಳಂ ತೋಳೊಳಮು[4] ॥
ತ್ಥಿತಮಾಗಿ ಭೂಷಣಂಗಳ್ ।
ನಿತಂಬಮಂಡಳದೊಳಂ ಕುಚಾಭೋಗದೊಳಂ ॥ 631

ವೃ ॥ ಕೊಡೆ ಗುಡಿ ತೋರಣಂ ದ[5]ಧಿ ಮಧುದ್ರವಮುಚ್ಚಗಜಂಕೆ ಲಾ[6]ಜೆ ಸಂ ।
ಗ[7]ಡಮಾಲರಕ್ಷತಂ ಬಿಳಿಯ ಸಾಸವೆ ಪೊಂಗೊಡನಷ್ಟಶೋಭೆ ಕ ॥
ನ್ನಡಿ ಕಡೆ ವರ್ದ್ಧಮಾನಪ[8]ಟಹಂ ತಿಜೆ ಮಂಗಳಗೀತನಾದಮೆ ।
ಲ್ಲೆಡೆಗ[9]ಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ ॥ 632

ಆಟಂ ಬಾಜನೆ ಗಾಡಿಗಳ್ ಪಸದನಂ ಬಳ್ದಿಂಗಳೊಳ್ವಾತು ಕೊಂ ।
ಡಾಟಂ ಕತ್ತುರಿ ಕಪ್ಪುರಂ ನಗೆ ತೆಗಟ್ ಪಾಟಂ ಬಿಯಂ ಜವ್ವನಂ ॥
ನೋಟಂ ತಂಬುಲಮಿಂಪು ಕಂಪು ವಿಭವಂ ಮೆಯ್ಮೆಳಮೆಂ[10]ದಿಂತಿವಂ ।
ಪೇಟಕ್ಕಾಗರಮೆಂಬನನ್ನ ಸುಸಿಲೇಂ ಪೇ[11]ಜ್ಪಗದೊಳ್ ತೀರದೇ ॥ 633

## ಸೂತ್ರಂ ॥ 151 ॥

ಸಾಧನಮಂ ಸಾಧ್ಯಕ್ಕವಿ ।
ಅನುಮಿತಿ. ರೋಧಿಯನಱಿದೂಹೆಗೆಯ್ವುದನುಮಿತಿಯೆನಿಕುಂ ॥
ಸೂಕ್ಷ್ಮಂ. ಸಾಧುಸಮಾಧಿಪರೇಂಗಿತ ।
ಬೋಧಂ ನಿ[12]ರ್ವ್ವಾದಮಪ್ಪುದಂತದು ಸೂಕ್ಷ್ಮಂ ॥ 634

1 ಮಿಂಕು. 2 ದಿಂಬುಧವಿಶಿಷ್ಟ. 3 ಮಾರ್ಪ್ಪದು, ಮಾಳ್ಪುದು. 4 ಮು । ದ್ಧತ. 5 ಧನ. 6 ಪತ್ರಿ. 7 ಗದಿಯುಲ, ಗುಮಾಳ. 8 ಪಟಹಾಂಡ. 9 ಯೊಳಗಲ್ಲಿ. 10 ಮೆಬುದಿಂತಿವಂ. 11 ಪೇಳ್ವಾಗ. 12 ನಿರ್ವ್ವಾಧ.

ಲಕ್ಷ್ಯಂ ||

ಅನುಮಿತಿಗೆ ||

ವೃ || ಎಳಮಿಂಚಿಲ್ಲಕ್ಕು ಮಾಖಂಡಲಲಲಿತಧನುರ್ದ್ದಂಡಮಿಲ್ಲಕ್ಕು ಮಭ್ರಾ |
ವಳಿಯಿಲ್ಲಕ್ಕುಂ ಕದಂಬಾನಿಲನ[1] ಸುಳಿವಿಲ್ಲಕ್ಕು ಮುದ್ಯನ್ಮಯೂರೀ ||
ಕುಳಲೀಲಾತಾಂಡವಾಡಂಬರವಿಳಸನಮಿಲ್ಲಕ್ಕು ಮಿ[2]ತಾಮಹೀಮಂ |
ಡಳದತ್ತಲ್ ನಲ್ಲನಂತಲ್ಲದೊಡೆ ತಡೆದದೇಕಿರ್ಪ್ಪನಿಂದಲ್ತೆ ಬರ್ಪ್ಪಂ || 635

ಅದಲ್ಲದೆಯುಂ ||

ಕಂ || ಬೆಸೆದಿರೆ ನಿನ್ನೊಸಳ ಕಾ |
ಲ್ಗಸವಸದಿಂದೆಱಗಿ ತಿಳಿಪಿದಯ್ ನಿರ್ವ್ಯಾಜಂ ||
ನೊಸಲೊಳ್ ನಿಸದಮಲಕ್ತಕ |
ರಸತಿಲಕಮ[3]ದಿಲ್ಲದಂದದೇಕಿಂತಕ್ಕುಂ || 636

ಸೂಕ್ಷ್ಮಕ್ಕೆ ||

ಕಂ || ಏಗಳ್ ನಮಗಕ್ಕುಂ ಸಂ |
ಯೋಗಮೆನಲ್ ಬಗೆವ ನಲ್ಲನಂ ಕುಱಿತು ಮನೋ ||
ರಾಗದಿನೊಡರಿಸಿದಳ್ ಚೆ |
ಲ್ವಾಗಿರೆ ಪೆಱಳೊರ್ವ್ವಳಬ್ಜದಳಮುಕುಳನಮಂ || 637

ಅಂತುಮಲ್ಲದೆಯುಂ ||

ಕಂ || ವಿನಯೋಪಚಾರವಚನಮು |
ಮನುಕೂಲಾಚರಣಮುಂ ವಿಭಿಸ್ನಾಸನಮುಂ ||
ಮನದೊಳಗೆ ಪುದಿದು ಪೂಣ್ಮಿದ |
ಮುನಿಸಂ ಕನ್ನಡಿಪುವಾ[4]ಗೆ ಬಗೆವೆಂ ಪ್ರಿಯೆಯೊಳ್ || 638

## ಸೂತ್ರಂ || 152 ||

ಲೇಶಂ ಅಥವಾ ಲವಂ.

ಗುಣಮನೆ ತಪ್ಪದು ದೋಷದ |
ಗಣನೆಗೆ ದೋಷಮುಮನಿನಿಸು ಗುಣಗಣನೆಗೆ ತಂ ||
ದೊಣರ್ಪ್ಪುದು ಲೇಶಂ ವಿಬುಧಾ |
ಗ್ರಣಿಗಳ್ ಕೆಲಬರ್ ನಿಗೂಹನಂ[5] ಲವಮೆಂಬರ್ || 639

ಲಕ್ಷ್ಯಂ ||

ಕಂ || ಒಡನಿರ್ದ್ದಗಲ್ಕೆಯಾದೊಂ |
ದೆಡೆಯೊಳ್ ದುಃಖಮನಸಹ್ಯಮಂ ಮಾಳ್ಪುದಱಿಂ ||
ಸುಡು ಸುಡು ಸಜ್ಜನರಪ್ಪವ |
ರೊಡಗೂಟಮನ[6]ಕ್ಕ ಖಳರ ಕೂಟಮೆ ಸುಖದಂ || 640

1 ನೆಸಗುವ್ವು. 2 ಮಹಾ. 3 ಮದಲ್ಲ. 4 ವಾಗಿ. 5 ಮಂ. 6 ನಕ್ಕೆ.

ನಿಗೂಹನಕ್ಕೆ ॥

ವೃ ॥ ಪರಿವಿಡಿಗೆಯ್ದು ಸೊಂದಿಗಿೞ ತಂದೆಯು ತಾಯು ಸವಿಷಪದೊಳ್ ತನೂ ।
ದರಿಯು ರತೋಪಯುಕ್ತರುತಿಯುಂ ವಿನತಾನನೆ ನಾಣ್ಚಿ ತೋ[1]ಳ್ . ॥
ಳ್ತುರುಶಿಂಜನರ್ತ್ತನಪ್ರಹತಕಂಕಣಝುಂಕೃತಹಸ್ತತೂರ್ಯ್ಯನಿ ।
ರ್ಭರರವದಿಂದದಂ ಮಱಸಿದಳ್ ಗಡ ಮುಗ್ಧೆಯುದೇಂ ವಿದಗ್ಧೆಯೋ ॥ 641

## ಸೂತ್ರಂ ॥ 153 ॥

ವ್ಯತಿರೇಕಮುಭಯಸಾಮ್ಯ ।
ವ್ಯತಿರೇಕಂ. ಪ್ರತೀತಿಯುಂ ತೋಱಿ ಭೇದಮಂ ಮಾಳ್ಪುದು ಸಂ ॥
ದೀಪಕಂ. ಗ[2]ತಿಯಿಂದಂ ಮಧ್ಯಾಂತ ।
ಸ್ಥಿತಮಾಗಿ ಬೆಳಪ್ಪುದಱಿಗೆ ದೀಪಕಮಕ್ಕುಂ ॥ 642

ಲಕ್ಷ್ಯಂ ॥

ವ್ಯತಿರೇಕಕ್ಕೆ ॥

ಕಂ ॥ ಗಂಭೀರಮುಮಳಲಕ್ಷ್ಮೀ ।
ಸಂಭವಪದಮಧಿಕಸತ್ವಮಾಗಿಯುಮೆಯ್ದು ॥
ಲ್ಕಂಭೋಧಿ ನೆಱೆದುದಿ[3]ಲ್ಲವ ।
ನಂ ಭಾಸುರನಿಶಿತಮತಿಯನತಿಕಲುಷಜಡಂ ॥ 643

ವೃ ॥ ವಸುಧೆಗೆ ಸಂದಹೀನರಿಪುವರ್ಗ್ಗಮನೋಡಿಸಿ ಚಕ್ರಿ ಮೆಚ್ಚಿ ಬ ।
ಣ್ಣಿಸೆ ಪತಿಭಕ್ತಿಯುಂ ಮೆಱೆದು ಮಂತ್ರಪದಕ್ಕಧಿನಾಥನಾಗಿ ಪೆಂ ॥
ಪೆಸವಿನಮಾರೊಳಂ ವಿಮುಖವೃತ್ತಿಯೊಳೊಂದದ ಪಕ್ಷಪಾತದಿಂ ।
ದೆಸಗದ ವೈನತೇಯನಿವನೆಂಬುದು ಸಾಹಸವೈನತೇಯನಂ ॥ 644

ಕಂ ॥ ವಾರಿಜಗಂಧಿ ವಿಭಾತಸ ।
ಮೀರಂ ನಿಜಸುರಭಿ ನಿನ್ನ ಸು[4]ಯ್ಯಿದಱೊಳದಂ ॥
ತೋರಗೆಯುಕ್ಕುಮೆ ಪರಗುಣ ।
ಹಾರಿಗೆ ನಿಜಗುಣಮು[5]ದೇಕೆ ಸಮನಿಸಿವಪುದೋ ॥ 645

ಕಾರಕದೀಪಕಕ್ಕೆ ॥

ಕಂ ॥ ನವಜಳದಾಗಮಮಿಂತೀ ।
ಭುವನಜನಕ್ಕೆಲ್ಲಮೆಯ್ದೆ ಮಾಡಿದುದಧಿಕೋ ॥
ತ್ಸವಮಂ ಪುತ್ತಂತದೆ ತಾಂ ।
ಪ್ರವಾಸಿಗಳ್ಗೆರ್ದೆಯೊಳೊದವಿಸಿತ್ತುದವಱಲಂ ॥ 646

---

1 ಕಾಮುಕ ॥ ಶ್ವರ, ತೋಳಕ ॥ ಶ್ವರ. 2 ಗತಿಯಾದಿಮಧ್ಯಾಂತ. 3 ದಿಲ್ಲವ. 4 ಸುಯ್ಯಲ್ಲಿಱಿಕೆಳಗಂ.
5 ನೊಳ್ಕು, ದೊಳ್ಕೆ.

ಕಂ॥ ಓಸರಿಸಿದ ಜವನಿಕೆಯೊಡ ।
ನೋಸರಿಸಿದನಿವಲೆ ಕಂತು ಕು[1]ಸುಮಾಂಜಲಿಯುಂ ॥
ಸೂಸಿದ ಪದದೊಳ್ ಸಭೆಗಂ ।
ಸೂಸಿದನೊ[2]ಡನೊಡನೆ ನನೆಯ ಮೊನೆಯಂಬುಗಳಂ ॥ 647

ಆವರಿಸಿತ್ತೊ ನಭೋಂತ ।
ರ್ಭ್ಭವಿವರಮನವರ್ದಿನೆಸಕಮೆನೆ ಬಿಳಯಿಗಳೋ ॥
ವೋವಿದು ಮದನನ ಸೋದನ ।
ದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ ॥ 648

ಕ್ರಿಯಾದೀಪಕಕ್ಕೆ ॥

ಕಂ॥ ಸೊಗಯಿಸಿದುದು ಕಾಗಾರ್ಗ್ಗಲದ ।
ಪುಗಿಲೊಳ್ ಜಲಜಲನೆ ಪರಿಯುತಿರ್ಪ್ಪೊಳ್ಪ್ಪನಲುಂ ॥
ಮುಗಿಲ ಪೊರೆವೊರೆಗಳೊಳ್ ಪೊಳೆ ।
ದೊಗೆವ ಚಳಚ್ಚಟುಳತರತಟಿದ್ವಿಳಸನಮುಂ ॥ 649

ಧರೆಯುಂ ಮೆಟ್ಟದೆ ಮೆಟ್ಟುವ ।
ಸುರಲಲನಾನೃತ್ಯಮಿತ್ತಲಭವನ ಸಭೆಯೊಳ್ ॥
ಕರಮೆಸೆದುದು ವಾ[3]ರಸ್ತ್ರೀ ।
ಪರಿನರ್ತ್ತನಮತ್ತಲಾಮಹೀಶನ ಸಭೆಯೊಳ್ ॥ 650

ಕುಳಿರ್ವೆಲರುಮಾಲಿನೀರುಂ ।
ತಳಿರ್ವಾಸುಂ ಚಂದ್ರಕಾಂತಮುಂ ಚಂದನಮುಂ ॥
ಕೊಳನುಂ ನಂದನವನಮುಂ ।
ಕ[4]ಳೆಯುವೆ ಬೇಸಗೆಯೊಳೆ[5]ನ್ನ ಬೇಟದ ಸೂಡಂ ॥ 651

## ಸೂತ್ರಂ ॥ 154 ॥

ಸಮನಿಸಿ ಬಿದಿವಸದಿಂದಂ ।
ಸಮಾಹಿತಂ. ಸಮಾಹಿತಂ ಬರ್ಪ್ಪೊಡದು ಸಮಾಹಿತಮೆನಿಕುಂ ॥
ಆವೃತ್ತಿ. ಸ[6]ಮಗೊಂಡರ್ತ್ಥಪದಾವೃ ।
ತ್ತಿ ಮತ್ತದಾವೃತ್ತಿಯೆಂಬ ಪೆಸರಂ ಪಡೆಗುಂ ॥ 652

ಲಕ್ಷ್ಯಂ ॥

ಸಮಾಹಿತಕ್ಕೆ ॥

ಕಂ॥ ಕಡುಗತ್ತಲೆಯೊಳ್ ಪ್ರಿಯನಿ ।
ರ್ದ್ದೆಡೆಗಾ[7]ಗಿಯೆ ಪೋಗಲೆಂದು ಮನೆಯುಂ ಪೊಱಮ ॥
ಟ್ಟೊಡೆಯಿಡಲಱಿಯದೆ ಮಱುಗುವ ।
ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್ ॥ 653

1 ಪುಷ್ಪಂ. 2 ನೊವರ್ಮೊರದಲೆ. 3 ದೇವ. 4 ಕಳೆಯುವು. 5 ಳೆನಗ. 6 ಸಮುಕೊಂಡ. 7 ಗಾಗಿರ.

ಕಂ॥ ಮುಳಿದಿರೆ ನಿಜವಲ್ಲಭೆಯಂ ।
ತಿಳಿಪಲ್ ಕಾಲ್ಗೆಱಗಲಿನಿಯನಿರ್ಪವಸರದೊಳ್ ॥
ಜಳಧರನಿನದಂ ನೆ[1]ಗೆದುದು ।
ತಳವಳಗು[2]ತ್ತಾಕೆ ತಾನೆ ಬಿಗಿಯಪ್ಪುವಿನಂ ॥ 654

ಆವೃತ್ತಿಗೆ॥

ವೃ॥ ಅಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ ಕಂ[3]।
ದಲಿ ಕುಸುಮಿಸಿದತ್ತುದ್ದಾಮನೀಪಾವನೀಜಾ ॥
ವಲಿ ಬಿರಿದುವೆ ಜಾತೀಯೂಥಿಕಾಕೇತಕೀಸಂ ।
ಕುಲಮವಿರಲಗಂಧಾಮೋದಿತಾಶಾಂತರಾಲಂ ॥ 655

ಕಂ॥ ಪಡೆಗುಂ ಮಹಿಮೋನ್ನತಿಯಂ ।
ಪಡೆಗುಂ ಸ[4]ನ್ಮಾರ್ಗದೆಸಕಮಂ ಗುಣದೊಳ್ಪಂ ॥
ಪಡೆಗುಂ ನಿರ್ಮಳಯಶಮಂ ।
ಪಡೆಗುಂ ಪಡೆಗುಂ ವಿಭುತ್ವಮಂ ಬುಧಸಂಗಂ ॥ 656

ವೃ॥ ಕಲಿ ಪಾರ್ತ್ಥಂ ಪಾರ್ತ್ಥನಿಂದಂ ಕಲಿ ರವಿತನಯಂ ಪಾರ್ತ್ಥನಿಂ ಕರ್ಣ್ಣನಿಂದಂ ।
ಕಲಿ ಭೀಮಂ ಪಾರ್ತ್ಥನಿಂ ಕರ್ಣ್ಣನಿನನಿಲಜನಿಂ ರಾಘವಾಧೀಶಭೃತ್ಯಂ ॥
ಕಲಿ ಶಕ್ರಾಪತ್ಯನಿಂ ಕರ್ಣ್ಣನಿನನಿಲಜನಿಂದಂಜನಾಪುತ್ರನಿಂದಂ ।
ಕಲಿ ಧಾತ್ರೀಚಕ್ರದೊಳ್ ವಿಕ್ರಮಗುಣನಿಳಯಂ ವೀರಮಾರ್ತ್ತಂಡದೇವಂ ॥ 657

## ಸೂತ್ರಂ ॥155॥

ಇತರೇತರಕಾರಕಸಂ ।
ಪರಸ್ಪರಂ. ಪ್ರತಿಪತ್ತಿ ಪರಸ್ಪರಂ ಸಮೂಹದೊಳೆಸೆವೊಂ ॥
ಸಾರಂ. ದತಿಶಯಗುಣದಿಂ ನಿರ್ದ್ಧಾ ।
ರಿತಮಪ್ಪುದು ಸಾರಮೆಂಬ ಸದಲಂಕಾರಂ ॥ 658

ಲಕ್ಷ್ಯಂ॥

ಪರಸ್ಪರಕ್ಕೆ॥

ಕಂ॥ ಸರಿಗೆಗೆ ಕೊರಲ್ ಕೊರಲ್ಗಂ ।
ಸರಿಗೆಯ[5]ಲಂಕರಿಸೆ ಸರಿಗೆ ವಂದುದು ಮುಯ್ಮ ॥
ಟ್ಟೆರಡುಂ ಪಡಂಗುಮೆಂಬಂ ।
ತಿರೆ ಕರಮೊ[6]ಪ್ಪಿದುದು ಕೊರಲಗೇಂದ್ರಾತ್ಮಜೆಯಾ ॥ 659

1 ನೆಗಲ್ದುದು. 2 ಗಾಢಾಳ್, ಗಾಗಾಳ್. 3 ಕಂಟಲಿ, ಕಂಡಲಿ. 4 ಸನ್ಮಾನ. 5 ವಲಂಸಗೆ, 6 ದೊಪ್ಪುವುದು.

ಸಾರಕ್ಕೆ ॥

ಕಂ॥ ಸಾರಂ ಸಂಸಾರದೊಳಬ ।
ಲಾರತ್ನಂ ಸಾರಮಲ್ಲಿ ಜವ್ವನಮದಜಿೊಳ್ ॥
ಸಾರಂ ಮಧುರಾಕಾರಂ ।
ಸಾರಂ ಮತ್ತಂತವ[1]ಕ್ಕು ಮನುಕೂಲರಸಂ ॥ 660

## ಸೂತ್ರಂ ॥ 156 ॥

ನಿಮೀಳನಂ.

ಪ್ರಕೃತಿಯಿನಲ್ಲದೊಡಾಗಂ ।
ತುಕಹೇತುವಿನಿಂ ಪ್ರಕೋಪರಾಗಾದಿಮನೋ ॥
ವಿಕೃತಿಯನುಪಲಕ್ಷಿಸಿ ತಿಳಿ ।
ಯೆ ಕಾ[2]ಣದಿರಲದು ನಿಮೀಳನಂ ಪೆಸರಿಂದಂ ॥ 661

ಲಕ್ಷ್ಯಂ ॥

ಕಂ ॥ ಸರಳತರಧವಳಸುಸ್ನಿ ।
ಗ್ಧರೂಪಮಾನೃ[3]ಪನ ದೃಷ್ಟಿ ಸಾಜದೊಳದಱಿಂ ॥
ದೊರೆಕೊಂಡುದೊಂದು ಚೇತೋ ।
ನುರಾಗಮಱಿಯಲ್ಕೆ ಬರ್ಪುದಲ್ತಣಮಾರ್ಗ್ಗಂ ॥ 662
ಮದಿರಾಮದಭರಪಾಟಲ ।
ವದನೆಯ ಮನದೊಳ್ ಪೊದಱ್ದ ಕೋಪಂ ತಾನಂ ॥
ತದು ಲಕ್ಷಿಸಲ್ಕೆ ಬಂದಿ ।
ರ್ದ್ದುದಿಲ್ಲ ಕೃತದೋಷನಾ[4]ಗಿಯುಂ ಕಾಮುಕನಿಂ ॥ 663

ಇವು ವಾಸ್ತವಭೇದಂಗಳ್ ॥

## ಸೂತ್ರಂ ॥ 157 ॥

ಔಪಮ್ಯಂ.

ಪಿನಾನುಮೊಂದು ತೆಱದಿಂ ।
ನಾನಾವಿಧವಸ್ತುರೂಪದೊಳ್ ಸಾದೃಶ್ಯಂ ॥
ತಾನೆನಿಸಿ ತೋರ್ಪ್ಪುದದು ಬುಧ ।
ಮಾನಿತಮೌಪಮ್ಯಮೆಂಬಲಂಕೃತಿಯಕ್ಕುಂ ॥ 664

## ಸೂತ್ರಂ ॥ 158 ॥

ಉಪಮಾ ಭೇದಂಗಳ್.

ವೃ ॥ ಉಪಮಾನಪ್ರತಿವಸ್ತುರೂಪಕಸಮಾಸೋಕ್ತಿಕ್ರಮಾಕ್ಷೇಪಸಾ ।
ವ್ಯಪರಾಖ್ಯಾನನಿದರ್ಶನೋತ್ತರಸಸಂದೇಹಭ್ರಮಾಪಹ್ನುತಿ ॥
ವ್ಯಪದೇಶಸ್ಮರಣಪ್ರತೀಪಸಮಯೋಗಾಪ್ರಸ್ತುತಸ್ತೋತ್ರಮೆಂ ।
ದುಪಮಾಭೇದಮಿವಕ್ಕುಮಂತೆ ದೊರೆವೆತ್ತರ್ಥಾಂತರನ್ಯಾಸಮುಂ ॥ 665

---

1 ರಕ್ಕೆಯುನು, ರಕ್ಕಮನು. 2 ಕಾಣಲಾದುದು. 3 ನೃಪರ. 4 ಮಾಗಿ.

ಅನಜೊಳಗೆ ॥

ಸೂತ್ರಂ ॥ 159 ॥

ಉಪಮೇಯಮಂ ಗುಣಲೇಶದಿ ।
ಉಪಮೆ. ನುಪಮಾನಕ್ಕೆಣೆಗೆ ವರ್ಪೊಡುಪಮೆಯೆನಿಕ್ಕುಂ ॥
ವ್ಯು[1]ಪಸರ್ಗವಿಷಯರೂಪ ।
ಪ್ರ[2]ಪಂಚಿತಮನೇಕಭೇದಮದು ತಾನಕ್ಕುಂ ॥ 666

ಲಕ್ಷ್ಯಂ ॥

ಧರ್ಮೋಪಮೆಗೆ ॥

ಕಂ ॥ ಜಲನಿಧಿವೋಲ್ ಗಂಭೀರಂ ।
ಬಲವೈರಿಯವೋಲ್ ಸಮಗ್ರವಿಭವಸನಾಥಂ ।
ಕುಲಗಿರಿವೋಲ್ ನಿಷ್ಕಂಪಂ ।
ಬಲಿಯಂತೆವೊಲಧಿಕದಾನಿ ದಾನವಿನೋದಂ ॥ 667

ಹೇತೂಪಮೆಗೆ ॥

ಕಂ ॥ ಪರಿವೃತ್ತತೆಯಿಂ ನುಣ್ಪಿಂ ।
ಶ[3]ರಕಾಂಡಪ್ರತಿಮಚಾರುಗೌರಚ್ಛವಿಯಿಂ ॥
ಪರಿಪಕ್ವತಾಳಫಳದೊಳ್ ।
ದೊರೆಯೆನಿಸುಗುಮವಳ ಘನಪಯೋಧರಯುಗಳಂ ॥ 668

ವಸ್ತೂಪಮೆಗೆ ॥

ಕಂ ॥ ಅಳಿಕುಳದಂತಳಕಚಯಂ ।
ದಳಿತಾಂಬುಜದಂತೆ ನಗೆಮೊಗಂ ಲಲಿತಾಂಗಂ ॥
ಮಿಳಿರ್ವ ಲತೆಯಂತೆ ತಳಮುಂ ।
ತಳಿರಂತೆ ಬೆಡಂಗುವೆತ್ತು ತೋರ್ಕುಂ ಸತಿಯಾ ॥ 669

ಶ್ಲೇಷೋಪಮೆಗೆ ॥

ಕಂ ॥ ಸಮವೃ[4]ತ್ತಸಂಧಿಲಕ್ಷಣ ।
ಸಮನ್ವಿತಂ ಜಾತ್ಯಲಂಕೃತಿಭ್ರಾಜಿತಮು ॥
ತ್ತಮಕಾವ್ಯಬಂಧದಂ[5]ತಾ ।
ದಮಿತಾರಿಗೆ ಸಾಜಮೊಪ್ಪುಗುಂ ಕಿ[6]ಱುದೊಡೆಗಳ್ ॥ 670

ಅನ್ಯೋನ್ಯೋಪಮೆಗೆ ॥

ವೃ ॥ ತಳಮುಂ ಕೆಂದಳಿರುಂ ಕುಚದ್ವಿತಯಮುಂ ಪೂಗೊಂಚಲುಂ ತೋಳ್ಗಳುಂ ।
ಸೆಳೆಗೊಂಬುಂ ಕುರುಳೋಳಿಯುಂ ಚಳದಳಿವ್ರಾತಂಗಳುಂ ಕೋಮಳಾಂ ॥
ಗುಳಿಯುಂ ತತ್ಕಳಿಕಾವಳೀರುಚಿಯುಮಂತೊಂದೊಂದಱೊಳ್ ಪೋಲ್ವೆಯಾ ।
ಗೆ ಲತಾಕೋಮಳೆ ಸಾರ್ದ್ರಕೋಕಲತೆಯುಂ ಪೂಗೊಯ್ದುಳಂ[7]ತಱ್ತಿಯಿಂ ॥ 671

1 ವ್ಯುಪಸರ್ಗ. 2 ಪ್ರಪಂಚಿತಮನೇಕಭೇದಮೆನಿಕ್ಕುಂ. 3 ಶರಕಾಂಡ, ಸ್ಮರಶರ... 4 ವೃತ್ತಿ. 5 [illegible]
6 ಕುಱಿವತಡೊಳ್. 7 ಳಂದ.

ವಿಪರ್ಯಾಸೋಪಮೆಗೆ ॥

ವೃ ॥ ಮೊಗಮುಂ ತಾವರೆ ಕಣ್ಣನುತ್ಪಲದಳಂ ಧಮ್ಮಿಲ್ಲಮುಂ ಸೋಗೆ ಸೆ ।
ಳ್ಳುಗುರಂ ಕೇದಗೆ ಪುರ್ಬ್ಬನಂಗಜನ ಬಿಲ್ ಪಂತಾಳಿಯುಂ ಮುತ್ತು ಕೆ ॥
ಯ್ಯುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿನಿಸ್ಸಾರವ ।
ಸ್ತುಗ[1]ಳೊಳ್ ಪೋ[2]ಲಿಸರಂತದೇಂ ಮರುಳರೋ ರೂಪಂ ವಿಚಿತ್ರಾಂಗಿಯಾ 672

ಬಹೂಪಮೆಗೆ ॥

ಕಂ ॥ ಶರದಂಬುದಮಂ ಗಂಗಾ ।
ತರಂಗಮಂ ಸಿಂಧುವಾರಕುಸುಮಶ್ರೀಯುಂ ॥
ಹರಹಾಸವಿಳಾಸಮುಮನನು ।
ಕರಿಸುವುದತಿವಿಶದಕೀರ್ತ್ತಿ ತೋಳ್ಗ್ಗೊಪ್ಪುವನಾ ॥ 673

ಮಾಲೋಪಮೆಗೆ ॥

ವೃ ॥ ಎಂತು ಬಸಂತಮುದರ್ಕ್ಕ ತೆಂಬೆಲರೆಂತದ ।
ರ್ಕ್ಕಂತು ತಳಿರ್ ತಳಿರ್ಗ್ಗೆಂತಲರ್ ಕುಸುಮೋತ್ಕರ ॥
ಕ್ಕೆಂತಳಿ ಮು[3]ತ್ತ ಮದಾಳಿಗೆಂತು ನಿನಾದಮುಂ ।
ತಂತೆ ತರಂತರಮೊಪ್ಪಿ ತೋಱಿದಳಗ್ಗಳಂ ॥ 674

ಕಲ್ಪಿತೋಪಮೆಗೆ ॥

ವೃ ॥ ಮೃಗಮದಕಲ್ಪಿತಪತ್ರಭಂಗರಮ್ಯಂ ।
ನಗೆಮೊಗಮುಜ್ವಳಕಾಂತಿ ನಾಡೆ ಸಾಮ್ಯಂ ॥
ಸೊಗಯಿಸುಗುಂ ಮೃಗಲಾಂಛನಾಭಿರಾಮಂ ।
ಮೃಗಧರಬಿಂಬಮಿದೆಂಬಿನಂ ನಿಕಾಮಂ ॥ 675

ವಾಕ್ಯೋಪಮೆಗೆ ॥

ಕಂ ॥ ಪರಮನೊಳಗೊಳಗದೊಂದಂ ।
ಪರಿಜ[4]ಪನಂಗೆಯ್ವೆ ನೆಗೞ್ದ ಸೂ[5]ಕ್ತ್ಯವ್ಯಕ್ತಾ ॥
ಕ್ಷರದಿಂ ನಿಗೂಢತರನಿ ।
ಜ್ಝರರವಗುಂಜದ್ಗುಹಾಚಳಕ್ಕೆಣೆಯಾದಂ ॥ 676

ಪ್ರತ್ಯಯೋಪಮೆಗೆ ॥

ಕಂ ॥ ಜಲಜಾಯಮಾನಮಲರ್ಗ್ಗಣ್ ।
ಪುಲಿನಂಮನ್ಯಂ ನಿತಂಬಮಳಿದೇಶೀಯಂ ॥
ಚಲದಳಕಪ್ರತತಿ ಮೃಣಾ ।
ಳಲತಾಕಲ್ಪಂಗಳಾಲ[6]ತಾಂಗಿಯ ತೋಳ್ಗಳ್ ॥ 677

1 ಗಳಂ. 2 ಪೋಲಿಸುವಂತ-ಟ್ಯಂ, ಪೋಲಿಸುವಂತದೇ. 3 ಮತ್ತ. 4 ಜಪಮಂ. 5 ಸೂಕ್ತ್ಯವ್ಯಕ್ತಾ
6 ನತಾಂಸೆಯ.

ಸಮಾಸೋಪಮೆಗೆ ||

ವೃ || ಕಮಲನಯನಂ ಕಂಬುಗ್ರೀವಂ ಘನಸ್ತನಮಂಡಳಂ |
ಭ್ರಮರರುಚಿಮತ್ಕೇಶಂ ಬಿಂಬಾಧರಂ ನಳಿತೋಳ್ ಪೆಡಂ ||
ಗ[1]ಮದುರ್ಗದು ಮೊಗಂ ರಂಭಾಸ್ತಂಭೋರು ತೆಳ್ವಸಿಜೊಪ್ಪೆ ವಿ[2] |
ಭ್ರಮದ ಕಣಿಯುಂ ಪೋಲ್ತರ ಸಿಲ್ತಲ್ಲಿ ಬೇಡಿತಿಯುರ್ ಕೆಲರ್ || 678

ಸೂತ್ರಂ || 160 ||

ಲಿಂಗವಚೋವಿಹಿತವಿಭೇ |
ಉಪಮಾ ದಂಗಳ್ ನ್ಯೂನಾಧಿಕಂಗ[3]ಳುಂ ಸದೃಶತೆಯಿಂ ||
ದೋಷಂಗಳ್. ಸಂ ಗತಮಲ್ಲದುವುಂ ದೋ |
ಷಂಗಳವುಪಮೆಗೆ ಯಥಾಕನೋದ್ವೇಜನದಿಂ[5] || 679

ಲಕ್ಷ್ಯಂ ||

ಲಿಂಗವಚನಭೇದಂಗಳ್ಗೆ ||

ಕಂ || ನಿರವದ್ಯಂ ಗಿಶದುರಿತಂ |
ಪರಿಪೂತಂ ಜಗದೊಳಿಂತಿವಂ ಗಂಗೆಯವೋಲ್ ||
ಸುರುಚಿರತೇಜಂ ಭಾಸುರ |
ತರಸ್ವರಂ ಶಿಖಿಶಿಖಾಕಲಾಪಂಗಳವೋಲ್ || 680

ಹೀನೋಪಮೆಗೆ ||

ಕಂ || ಎರಲೆಯ ಪಿಂಡುಗಳಂ ದೆಸೆ |
ವರಿವರಿವಿನಮುಳಿದೆ ತಗುಳ್ವ ನಾಯಂತೆ ರಣಾ ||
ಜಿರದೊಳ್ ದಿಟ್ಟಿದ ಬಲವ |
ದ್ವಿರೋಧಿಸೈನಿಕಮನಾನೃಪಂ ಪೆಂಕೊಂಡಂ || 681

ಅಧಿಕೋಪಮೆಗೆ ||

ಕಂ || ಮುಂ ಬಿಟ್ಟು ಪರೆದ ಕತ್ತಲೆ |
ಯಂ ಪೆದಱಿ ತೆರಳ್ಚಿ ಪೆಳಪ ಪೆಳಗಿಂದೆಸದಿ ||
ರ್ಪ್ಪಂಬುಜಸಖನಂತಿರೆ ಮಿಾ |
ನಂಬುಜಾ ಪೆಳಗಿದಪುದಖಿಳಗಗನಾಂತರಮಂ || 682

ಅಸಾದೃಶ್ಯಕ್ಕೆ ||

*ವೃ || ದಾನಾಂಬುಚುಂಬಿತಕಪೋಲತಲಂ ಮದೇಭಂ |
ತಾನೊಪ್ಪುವಂತೆ ಸೊಗಯಿಪ್ಪುದು ನೋಡೆ ಪೀನಂ ||
ನಾನಾರುಚಿಪ್ರಚುರಚಾಪಕಳಾಪಕಾಂತಂ |
ಸಾನುಪ್ರದೇಶದೊಳುಪಾಗತಮಿಾಮಯೂರಂ || 683

1 ಗಮದುರ್ಗದಿಕ, ಗಮದುರ್ಗಟಿ, ಗಮದರ್ನಗೆ. 2 ಪಿ । ಭ್ರಮ-ಫದಗಳುಂ. 3 ಗಳವ. 4 ಸಂಗತಮುವಹ್ಲದುವು. 5 ದೊಳ್. * ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಇದೆ.

* ಕಂ॥ ಲತೆಯೊಳ್ ನಳಿತೋಳ್ ಪಲ್ಲವ ।
ತತಿಗಳೊಳಧರಂ ಕಱುಂಕೆಯೊಳ್ ಮೆಯ್ವಣ್ಣಂ ॥
ವಿತತಾಂಶುವಪ್ಪ ಹಿಮದೀ ।
ಧಿತಿಯೊಳ್ ಮೊಗಮುಪಮೆವೆ[1]ತ್ತು ತೊಳಗುವುದವಳಾ ॥ 684

## ಸೂತ್ರಂ ॥ 161 ॥

ಪ್ರತಿವಸ್ತೂಪಮೆ ಸಾಮ್ಯ ।
ಪ್ರತಿವಸ್ತೂಪಮೆ ಪ್ರತೀತಿಯಿಂದಂ ಸಮಾನವಸ್ತುನ್ಯಸನಂ ॥
ರೂಪಕಂ ಪ್ರತಿಪಾದಿಸುವುದಭೇದಾ ।
ತ್ಮತೆಯಿಂದುಪಮೆಯುಮದಲ್ತು ರೂಪಕಮ[2]ಕ್ಕುಂ ॥ 685

ಲಕ್ಷ್ಯಂ ॥

ಪ್ರತಿವಸ್ತೂಪಮೆಗೆ ॥

ಕಂ ॥ ನಿ[3]ನ್ನನ್ನನೊರ್ವನುಂ ಸಂ ।
ಪನ್ನಗುಣಂ ಪುಟ್ಟಲರಿಯನಿನ್ನುಂ ಮು[4]ನ್ನುಂ ॥
ಸನ್ನುತನಮೇರುಭೂರುಹ ।
ದನ್ನವು ಪೆಱತಾ[5]ವ ಮರನುಮೇಂ ಪುಟ್ಟುಗುಮೇ ॥ 686

ಅಸಮಸ್ತರೂಪಕಕ್ಕೆ ॥

ವೃ ॥ ನೆಲೆಮೊಲೆ ಪೊನ್ನ ಸೊ[6]ನ್ನಲಿಗೆಯಾಗೆ ಮೊಗಂ ಸರಸಿಜಮಾಗೆ ಕ ।
ಣ್ಮಲರಲರಾಗೆ ಕೆಂದಳಮೆ ಕೆಂದಳಿರಾಗೆ ಕನತ್ಕಪೋಳಮು ॥
ಜ್ವಲಮುಕುರಂಗಳಾಗೆ ದರಹಾಸಮೆ ಸೂಸುವ ಲಾಜೆಯಾಗೆ ಕೋ ।
ಮಲಲಲಿತಾಂಗಿಯರ್ ನೆರದು ನೋಡಿದರಂದಿದಿಗೋರ್ಗಳ್ವಮಾಟ್ಕೆಯಿಂ ॥ 687

ಸಮಸ್ತರೂಪಕಕ್ಕೆ ॥

ವೃ ॥ ವದನಾಬ್ಜಂ ಕರಪಲ್ಲವೋಪನಿ[7]ಹಿತಂ ಬಾಷ್ಪಾಂಬುವಿ[8]ಪ್ಲಾವಿತಂ ।
ವಿದಳನ್ನೇತ್ರವಿನೀಲನೀರರುಹಮುಷ್ಣೋಚ್ಛ್ವಾಸದಿಂಪಂ ಕಱಿಂ ॥
ಗಿದ ವೃತ್ತಾಧರವಿದ್ರುಮಪ್ರತತಿ ಚಿಂತಾಂಭೋಧಿಮಗ್ನಂ ಕರಂ ।
ಕುದಿಯುತ್ತಿರ್ದರ್ದೆ ಸೂಚಿಕುಂ ವಿರಹದುಃಖಾಕ್ರಾಂತಿಯುಂ ಕಾಂತೆಯೊಳ್ ॥ 688

ವಿಭಕ್ತರೂಪಕಕ್ಕೆ ॥

ವೃ ॥ ಅಂಬುಜಸೂತ್ರಮೆಂಬ ಪೆ[9]ಣೆದಾವಣೆಯುಂ ಪಱದಾವಲೆಂಬ ಬಾ ।
ಱಿಂಬಮುನೊತ್ತಿ ಕಿಱ್ತು ಲತೆಯೆಂಬ ತುರಂಗಮುಮಂ ಪೊರಳ್ಚಿ ಧಾ ॥
ತಾಂಬುತರಂಗಮೆಂಬ ಪರಿಕಾಱನನಟ್ಟಿ ಮದಾಳಿಯೆಂಬ ಗುಂ[10] ।
ಡಂ ಬೞಿಯಟ್ಟಿ ಸೋ[11]ವುದು ಸಮೀರಣವಾರಣಮಾಪ್ರದೇಶದೊಳ್ ॥ 689

* ಈಪದ್ಯಕ್ಕೆ ಹಿಂದೆ ಒಂದುಪ್ರತಿಯಲ್ಲಿ "ಅಲ್ಲಿಯೂನಾದ್ಯಯಕ್ಕೆ" ಎಂದಿದೆ. 1 ಗತ್ತ್ಯತೊಳಗುವುದವಳಾ. 2 ಭೇದಂ. 3 ನಿನ್ನಪೋಲಿನೊರ್ವ್ವರಂ. 4 ಮುನ್ನಂ. 5 ತಾದ. 6 ಸೊನ್ನರಿಗ, ಸಂನತಿಗ. 7 ವಿಹಿತಂ. 8 ಲಿಪ್ತಾವಿಲ. 9 ಪೆಗದಾಗಗೆಯುಂ. 10 ನಾ।ಡಂ. 11 ಪಾಯುವುದು.

ವಿಶೇಷಗುಣರೂಪಕಕ್ಕೆ ॥

ವೃ ॥ ಜಗದಾಲೋಕನದರ್ಪ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ ।
ಜಗಜೋದ್ದೀಪನಪಿಂಡಮಂಬರಸರಸ್ಯು[1]ತ್ತಂಸಹಂಸಂ ವಿಯೋ ॥
ಗಿಗಣಾಕೂತಕುರಂಗಪೋತಭಯಕೃ[2]ತ್ಕಂಠೀರವಂ ಚೆಲ್ವುವೆ ।
ತ್ತೊಗೆದತ್ತಂಬುಧಿವೀಚಿನ[3]ರ್ತ್ತನಕಂ ಬಿಂಬಂ ಸುಧಾಸೂತಿಯಾ ॥ 696

## ಸೂತ್ರಂ ॥ 162 ॥

ಉಪಮಾನಕಥನಮೊಂದಱೊ ।
**ಸಮಾಸೋಕ್ತಿ.** ಳುಪಮೇಯಮನಱಿವುದದು ಸಮಾಸೋಕ್ತಿ ನಿಷೇ ॥
**ಆಕ್ಷೇಪಂ.** ಧಪದಂ ತಾನೆಂಬಂತಾ ।
ಗೆ ಪೇೞ್ದಾಕ್ಷೇಪಮಕ್ಕುಮದು ಬಹುರೂಪಂ ॥ 697

ಲಕ್ಷ್ಯಂ ॥

ಸಮಾಸೋಕ್ತಿಗೆ ॥

ಕಂ ॥ ಫಳತರುಗಳ್ ಪಲವುಂ ಬನ ।
ದೊಳಗೆ ಸು[4]ರೋರ್ವ್ವೀರುಹಪ್ರಕಾಶಂಗಳ್ ತಾ ।
ಮೊಳವಾದೊಡಮೆಂತುಂ ಬಗೆ ।
ಗೊಳಿಸಿದಪುದಿದೊಂದೆ ನೂತಚೂತಕುಜಾತಂ ॥ 698

ಆಕ್ಷೇಪಕ್ಕೆ ॥

ಕಂ ॥ ಜಡನಮೃತಂ ಜನಿಯಿಸಿ ಪಾ ।
ಲ್ಗಡಲೊಳ್ ವಿಧು ಪುಟ್ಟಿದಂ ಕಳಾಮಯನೆಂಬೀ ॥
ನುಡಿ ಪುಸಿ ಜಡಾತ್ಮಕಂ ವಿಷ ।
ದೊಡನೆ ವಿಷಾಕರನೊಳೊಗೆದನೆಂ[5]ಬುದೆ ತಥ್ಯಂ ॥ 699

ಅಂತುಮಲ್ಲದೆಯುಂ ॥

ಕಂ ॥ ಪೊಗೞಲ್ಕೆ ನೃಪನಂ ನಾ ।
ಲಗೆಯೊಂದಱ ಮನುಜರಿರ್ಕ್ಕೆ ನೆಱೆಯುವಣಂ ನಾ ॥
ಸುಗಿಪುಂ ಪವನಾಧ್ವಮನಾ ।
ವಗಮಾಪಂ ವ್ಯಾಪದಿಂದಮುಳಿಯುಳ್ ನೆಱೆವಂ ॥ 700

## ಸೂತ್ರಂ ॥ 163 ॥

ಪೊಸಯಿಸುವರ್ತ್ಥಂ ಕ್ರಿ[6]ಯೆಯಿಂ ।
**ಸಾಮ್ಯಂ.** ಪ್ರಸಿದ್ಧವಸ್ತುವಿನ ದೂರಗೆ ವರೆ ಸಾಮ್ಯಂ ಮ ॥
**ಪರಾಖ್ಯಾನಂ.** ತ್ತ ಸಮಾನವಿಶೇಷಣಗುಣ ।
ಲಸಿತಂ ಸಮವೃತ್ತಮಪ್ಪುದು ಪರಾಖ್ಯಾನಂ ॥ 701

---

1 ಸ್ಯುತ್ತುಂಗಹಂಸಂ. 2 ಕೃ. 3 ನರ್ತಕಿ. 4 ಸುರಾವನಿರುಹಪ್ರಕಾಶಂಗಳ್. 5 ನೆಂಬಿದ. 6 ಕ್ರಿಯುಯುಂ, ಕ್ರಿಯೆಯುಂ.

ಲಕ್ಷ್ಯಂ ॥

ಸಾಮ್ಯಕ್ಕೆ ॥

ಕಂ ॥ ಸಕಲಾರ್ತ್ಥಿಜನಮನೋರಥದಾ ।
ಯಕಂ ಮಹೋದಾತ್ತಮೂರ್ತ್ತಿ ಸೌಂದ್ರ್ಯಚ್ಛಾಯಂ ॥
ಸು[1]ಕರಾಭಿಗಮಂ ನರವಾ ।
ಳಕನಿರೆ ಕಲ್ಪವನೀಜಮೇಗೆಯ್ದಪುದೋ ॥ 702

ಪರಾಖ್ಯಾನಕ್ಕೆ ॥

ಕಂ ॥ ವಿಕಚಸರಸೀರುಹಂ ಕೋ ।
ಕಕುಳವ್ಯಾಭಾಸಿ ಭೂಗೊಳಂ ತಾನಿರೆಯುಂ ॥
ಬಕನಿಕರಲುಳಿತಕಲುಷೋ ।
ದಕವಿರಳದೊಳಂಚೆ ಪಂಚೆಯೊಳ್ ವಸಿಯಿಕುಮೋ ॥ 703

## ಸೂತ್ರಂ ॥ 164 ॥

ಎಂತುಟು ಮುನ್ನಂ ಪೇಳ್ದ ।
ದೃಷ್ಟಾಂತಂ. ರ್ತ್ಥಂತರಮುಂತುಟನೆ ಬೞಕೆ ತೋಱುವುದದು ದೃ ॥
ಉತ್ತರಂ. ಷ್ಟಾಂತಂ ಪ್ರಶ್ನಾರ್ತ್ಥದೊಳೋ ।
ರಂತನುಗುಣಮಾಗೆ ಪೇೞ್ವುದುತ್ತರಮೆನಿಕುಂ ॥ 704

ಲಕ್ಷ್ಯಂ ॥

ದೃಷ್ಟಾಂತಕ್ಕೆ ॥

ಕಂ ॥ ಭವದಾಲೋಕನದಿಂದಾ ।
ಯ್ತುವಳ್ಗೆ ಪಿರಿದುಂ ಮನೋವಿ[2]ಕಾಸಮದೀಗಳ್ ॥
ಕುವಲಯಬಂಧುವಿನಾಲೋ ।
ಕ[3]ವೆ ಮಾಡುವುದಲ್ತೆ ಕುಮುದವನವಿಕಸನಮಂ ॥ 705

ವೃ ॥ ಪತಿಯಿಂ ಪಿಂಬಡಿನೊಳ್ ಪತಿವ್ರತೆಗೆ ಪೇೞೊಂದುಂಟೆ ಕೃತ್ಯಂ ಪಿರಾ ।
ಗ[4]ತಿಯುಂ ಮೋಕ್ಷ ತದನುಪ್ರಯಾಣವಿ[5]ಧಿಯುಂ ತಾವಲ್ಲದೆಂದಿಂತಿದಂ ॥
ಕ್ಷಿತಿಗೆಲ್ಲಂ ತಿಳಿಪಾಗೆ ತೋರ್ಪ್ಪ ತೆಱದಿಂ ರಾಗೋದಯಂ ಪಿಂಗೆ ಸಂ[6] ।
ಗತೆ ಸಂಧ್ಯಾಂಗನೆ ಪೋದಳಾ[7]ದೊಲವಿನಿಂ ಪೆನ್ನೊಳ್ ದಿನಾಧೀಶನಾ ॥ 706

ಉತ್ತರಕ್ಕೆ ॥

ವೃ ॥ ಮರಣಮೆನಿಪ್ಪುದಾವುದು ದರಿದ್ರತೆ ಪತ್ತಿರ ಕುತ್ತಮಾವುದಂ ।
ತರಿಸದೆ ನಿಂದ ಚಿಂತೆ ಸುಖಮಾವುದು ಪುತ್ರಮುಖಾವಲೋಕನಂ ।
ನರಕದ ದುಃಖಮಾವುದವಿನೀತಕಲತ್ರಮುದಾತ್ತಮಪ್ಪಲಂ ।
ಕರಣಮದಾವುದಗ್ಗ[8]ಳಿಕೆವೆತ್ತ ಗು[9]ಣಂಗಳ್ ಭೂತಳಾಗ್ರದೊಳ್ ॥ 707

---

1 ಸುಕರಾಬಿಗಮಂ. 2 ವಿಕಾರವುದಾಗಳ್. 3 ಕವಲ್ಪಮಾಡುವುದು. 4 ಗತಿಯುಂ. 5 ವಿಧಿಯುಂ ತಾವಾತವೆಂ. 6 ಸಂ। ಗತಿ. 7 ಳೊಂದೊಲವಿನಿಂ. 8 ಬಟ್ಟೆಯೂವು. 9 ಗುಣಂ ಸುಜನೈಕಬಾಂಧವಾ.

## ಸೂತ್ರಂ ॥ 165 ॥

ಸಂಶಯಂ. ಭ್ರಮಂ. ಅಪಹ್ನುತಿ.

ಮಾತೇನೊ ಸಂಶಯಮಂ ಸಂ[1] ।
ಶೀತಿಪರಂ ಚಿತ್ತಮೋಹನಂ ಭ್ರಮಮಕ್ಕುಂ ॥
ಭೂತಾರ್ತ್ಥಾಪಹ್ನವಸಂ[2] ।
ಭೂತಮದನ್ಯಾರ್ತ್ಥದೃಷ್ಟ್ಯಪಹ್ನುತಿನಾಮಂ ॥ 708

ಲಕ್ಷ್ಯಂ ॥

ಸಂಶಯಕ್ಕೆ ॥

ವೃ ॥ ಅಳಿಗಳೊ ನೀಳ್ದ ಕರ್ಪ್ಪುಗೆಯೊ ಕೆಂದಳಿರೋಳಿಯೊ ಸುತ್ತುಗೊಂಡು ತ ।
ಳ್ತೆಳುವುರಿಮಾಲೆಯೋ ಸರಸಪಕ್ವಫಲಂಗಳೊ ವಿಸ್ಫುಲಿಂಗಸಂ ॥
ಕುಳಮೊ ಮನಕ್ಕೆ ಸಂದೆಯಮಗುಂದಲೆಯಾಗಿರೆ ನೋಡಿನೋಡಿ ಕಂ ।
ಟಳಿಸುನುವೆನ್ನಮೆಯ್ ಕೆಳದಿ ಪೇ[3]ಳಿದು ಮಾಮರನೋ ದವಾಗ್ನಿಯೋ ॥ 709

ಭ್ರಮಕ್ಕೆ ॥

ಕಂ ॥ ಮಣಿಭವನಂಗಳ ರುಚಿಗಳ್ ।
ಪೆಣೆದು ನಭೋಂಗಣದೊಳಿಂ[4]ದ್ರಚಾಪವಿಳಾಸ ॥
ಕ್ಕೆಣೆಯಾಗಿರೆ ಬಹುವಿಧದಿಂ ।
ಕುಣಿವುವು ಕಾರ್ಗ್ಗೆತ್ತು ಕೇಗಿ ಸೋಗೆನವಿಲ್ಗಳ್ ॥ 710

ವೃ ॥ ಕವಿವ ಕುಪೇರಧೂಪದ ಕವಿಲ್ವೊಗೆಯುಂ ನವಮೇಘಮಾಲಿಕಾ ।
ನಿವಹಮೆಗೆತ್ತು ತೋರ್ಪ್ಪ ಮಣಿದೀಧಿತಿಯುಂ ಕುಡುಮಿಂ[5]ಚೆಗೆತ್ತು ಪೊ ॥
ಣ್ಮುವ ಪಟಹಪ್ರಣಾದಮನೆ ಮೇಘಸಿನಾದಮೆಗೆತ್ತು ಕಾಂತಿಂ ।
ಡವಮನೊಡರ್ಚ್ಚುಗಂ ಶಿಖಿಕುಳಂ ಕನಕಾಯುತಕೂಟಕೋಟಿಯೊಳ್ ॥ 711

ಅಪಹ್ನುತಿಗೆ ॥

ಕಂ ॥ ಉನ್ಮದಮಧುಕರಕುಳರಸ ।
ವ[6]ನ್ಮಧುರಝುಂಕಾರನಿನದಮಲ್ತಿದು ಪೇಣಂ ॥
ಮನ್ಮಥಚಾಪವಿಮುಕ್ತೋ ।
ದ್ಯನ್ಮಾರ್ಗ್ಗಣಭೀಂಕೃತಿಸ್ವನಂ ತಾನಕ್ಕುಂ ॥ 712

---

1 ಸಂ । ಭೀತಿ, ಸಂ । ಭೀತ. 2. ಸಂ । ಪೂತ, ಸಂ । ಧಾತ. 3 ಕಳಿದು. 4 ಕಮರಚಾಪ. 5 ಮಿಂಚು 6 ವನ್ಮಧು.

## ಸೂತ್ರಂ ॥ 166 ॥

ಉ[1]ಪಮೇಯಮನ್ಯಗಾಭ್ಯಪ್ರೋ।
ವ್ಯಪದೇಶಂ. ಪ[2]ಪನ್ನಮುಪಮಾನಮಾಗೆ ಮುಖ್ಯಮದಕ್ಕುಂ ॥
ಸ್ಮರಣಂ. ವ್ಯಪದೇಶಂ ಮುಂ ಪೋದುದ।
ನಪೂರ್ವ್ವವಮಂ ಕಂಡು ನೆನೆವುದದು ತಾಂ ಸ್ಮರಣಂ ॥ 713

ಲಕ್ಷ್ಯಂ ॥

ವ್ಯಪದೇಶಕ್ಕೆ ॥

ಕಂ ॥ ಕುಚಯುಗಳಚ್ಛಲದಿಂದೊಂ।
ದಿ ಚಕ್ರವಾಕದ್ವಯಂ ಭುಜವ್ಯಾಜಲತಾ ॥
ರುಚಿಗಳೊಳಿರ್ದ್ದಪ್ಪುವು ನಾ।
ಡೆ ಚೆಲ್ವವೆತ್ತಾಸ್ಯಮಿಷಸರಃಪರಿಸರದೊಳ್ ॥ 714

ಸ್ಮರಣಕ್ಕೆ ॥

ಕಂ ॥ ಮನಕಂ ಪಕ್ಕಲ್ಲದೆ ನೆ[3]ಲ।
ನಿನಿಸಾನುಂ ಮೆಚ್ಚೆ ಕಣ್ಣ್ಗನಂ ನೋಡಿ ನರಂ ॥
ನೆನೆದಂ ತನ್ನೊಳ್ ತಾಗಿದ।
ಪಿನಾಕಪಾಣಿಯ ಕಿರಾತತನುಸಾಷ್ಠವಮಂ ॥ 715

ವೃ ॥ ವಿಶಾಳಮಳನೋಗ್ರತುಂಗಗಿರಿಕುಂಜಸಂಜಾತಮ।
ಪ್ರಕೋಕವನದಲ್ಲಿ ಧಾತುಜಳನಿರ್ಜ್ಝರಂ ಪಾಯೆ ಮಾ ॥
ಸಶೋಣಿತಮಯಂಬೊಲಾಗಿ ಕಿಱಿದಂತರಂ ತೋಱೆ ಕಂ।
ಡು ಶಾರ್ಙ್ಗಿ ನೆನೆದಂ ಹಿರಣ್ಯಕನದೊಂದುಬಿಬ್ಬಂದವಂ ॥ 716

## ಸೂತ್ರಂ ॥ 167 ॥

ಅ[4]ನುಕಂಪೆಯಕ್ಕೆ ಮೇಣ್ ಕು।
ಪ್ರತೀಪಂ ತ್ಸನಮುಪಮೇಯಮಸ್ಥಿತಂ ಪ್ರತೀಪಂ ಗತೆಗೊಂ ॥
ಸಮುಯೋಗಂ ಡ[5]ನುಗತಮಾಗಿರೆ ಗುಣದೋ।
ಷನಿರೂಪಣದಿಂ ವಿಭಾಗಮದು ಸಮುಯೋಗಂ ॥ 717

ಲಕ್ಷ್ಯಂ ॥

ಪ್ರತೀಪಕ್ಕೆ ॥

ಕಂ ॥ ಅಮಲಿನಮಾಗಿಯುಮಿವನಿ।
ನ್ನ ಮೊಗಂ ಮೃಗಲಕ್ಷ್ಮನೆಣೆಗೆ ವಂದಪುದಿನಿಸಂ ॥
ಕಮಲಾಯತಾಕ್ಷಿ ಕಜ್ಜಲ।
ವಿವಿಕ್ತತಾಶ್ರುದಬಿಂದುಮಲಿನಕಪೋಲಂ ॥ 718

1 ಉಪಮೆಯುಮನ್ಯವ್ಯಾಪೋ. 2 ಪ್ರಪನ್ನ. 3 ನಲಿಗಿನಿಸಾನುಂಪೆಚ್ಚೆ. 4 ಅನುಕಂಪಮಕ್ಕೆ. 5 ದ್ದಾವಾತ.

ಕಂ॥ ಅಸಿತೋತ್ಪಳದಳಶೋಭೆಯು।
ನ[1]ಸೆಯೆ ಕಟಾಕ್ಷದೊಳ್ ತ[2]ಳೆದ ಮದದಿಂದಾಲೋ॥
ಕಿಸದಿರು ಮುಗ್ಧೆ ಮಾನಿಸಿ।
ದೆಸೆವೆಸೆಗಳೊಳೊಳವು ಕುವಲಯಾಕರಮೆನಿತುಂ॥ 719

ಸಮಯೋಗಕ್ಕೆ॥

ಕಂ॥ ಮೃಗನಯನೆಯುರೊಲವುಂ ಬ।
ಳ್ಳಿಗೊಂಡು ತಳ್ತಿರೆ ಪೊಳೆದು ಮಿಂಚುವ ಮಿಂಚುಂ॥
ಬಗೆವಾಗಳ್ ನಿಲ್ಲವದೊಂ।
ದು ಗೇಱಿಗೆಯುಂ ಘನನಿಬದ್ಧಮೆನೆ ಸಂದಿರ್ದ್ದಂ॥ 720

## ಸೂತ್ರಂ ॥ 168 ॥

ಬಗೆದಿರ್ದ್ದ ಜೇಐದೊಂದಂ।
ಅಪ್ರಸ್ತುತಪ್ರಶಂಸೆ. ಪೊಗೞ್ವೊಂದಪ್ರಸ್ತುತಪ್ರಶಂಸೆಯೆನಿಕ್ಕುಂ॥
ಅತ್ಥಾಂತರನ್ಯಾಸಂ. ನೆಗೞ್ದ ನುಡಿವುದನೆ ಸಾಧಿಸಿ।
ನಿಗದಿಪ್ಪುದತ್ಥಾಂತರಂ ಪ್ರಸಂಗನ್ಯಾಸಂ॥ 721

ಲಕ್ಷ್ಯಂ॥

ಅಪ್ರಸ್ತುತಪ್ರಶಂಸೆಗೆ॥

ವೃ॥ ಮೃಗಹರಿತಪ್ರವಾಳನವಶಾದ್ವಲರಾಜಿಯುನಾಯುಗ್ದ ಹೋದು ತ।
ಣ್ಣೊವಿದ ನಿರ್ಝರಾಂಬುಗಳನೆಯ್ದನೆ ಪೀರ್ದ್ದ ನಿಜಾಂತರಂಗದೊಳ್॥
ಪುದಿದನುರಾಗದಿಂದಳಸಿ ಪುಲ್ಲಗಳಾರೊಳವೆಂದು ದೈನ್ಯಮಿ।
ಲ್ಲದೆ ಸುಖಮಿರ್ಪ್ಪವೀವನನಿಕುಂಜವಿಭಾಗದೊಳೇಣಸಂಕುಳಂ॥ 722

ಅತ್ಥಾಂತರನ್ಯಾಸಕ್ಕೆ॥

ವೃ॥ ಜಗದೊಳಗುಳ್ಳ ನದೀಪ್ರವಾಹಜಲಂಗಳನೊಟ್ಟಿ[3]ಡಿದಾಮಗಂ।
ಪುಗೆಯುವೊತ್ತದು ಮೇರೆಯಂ ಬಡಬಾನಳಂ ಬಿಡದಾಗಳುಂ॥
ತಗುಳ್ ಪೀರೆಯುಮಂತದೆಲ್ಲಸಿತಪ್ಪೊಡಂ ತವದಂತೆಪೋಲ್।
ಬಗೆದು ನೋಡೆ ಮಹಾತ್ಮರಪ್ಪವರೇಕರೂಪರದೆಲ್ಲಿಯುಂ॥ 723

ಕಂ॥ ರೂಪದ್ಧನಾರಿಯಾಯ್ತು ವಿ।
ರೂಪಾಕ್ಷಂಗೆಂತು ಶಾಂತರೌದ್ರಾತ್ಮಕಮಿ॥
ರೂಪು ಸಿನಗಾದುದಂ[4]ತೆ ಮ।
ಹಾಪುರುಷರ ಚರಿತಮಪರತಂತ್ರಮಚಿಂತ್ಯಂ॥ 724

ಇವು ಉಪಮಾಭೇದಂಗಳ್॥

1 ನೆಸೆ. 2 ತಳೆದು. 3 ಳೊಟ್ಟಿದಿ. 4 ದಂತು.

ಸೂತ್ರಂ ॥ 169 ॥

ನಾಡಾಡಿಗಳಱಿವಿನಂ ಕೆ ।
ಅತಿಶಯಂ. ಯ್ದೂಡ್ಗಿದ ವಸ್ತೂಪವರ್ಣ್ಣನಂ ವಿಸ್ಮಯಮಂ ॥
ಮಾಡುವ್ರೊಡತಿಶಯಮಕ್ಕುಂ ।
ನಾಡೆಯುಮಿದಱಿಂದಮಾವುದುಂ ಬಗೆಗೊಳಿಕುಂ ॥ 725

ಸೂತ್ರಂ ॥ 170 ॥

ವಿರೋಧಮುತ್ಪ್ರೇಕ್ಷೆ ವಿಭಾವನಾಹ್ವಯಂ ।
ಅತಿಶಯ ತಿರೋಹಿತಂ ಪೂರ್ವ್ವಮಹೇತು ತದ್ಗುಣಂ ॥
ಭೇದಂಗಳ್. ಪರಸ್ಪರಾಸಂಗತಿಕಂ ವಿ[1]ಶೇಷಮುಂ ।
ನಿರೂಪ್ಯಮಾಣಾತಿಶಯಪ್ರಭೇದಮುಂ ॥ 726

ಅಲ್ಲಿ ॥

ಸೂತ್ರಂ ॥ 171 ॥

ಅನ್ಯೋನ್ಯವಿರುದ್ಧಪದಾ ।
ವಿರೋಧಂ. ರ್ತ್ಥನ್ಯಾಸಮೆ ತಾಂ ವಿರೋಧಮವಿವಕ್ಷಿತಸಾ ॥
ಉತ್ಪ್ರೇಕ್ಷೆ ಮಾನ್ಯಮೆ ತದ್ಗುಣಯೋಗದಿ ।
ನನ್ಯತ್ವಾರೋಪಮಪ್ಪುದುತ್ಪ್ರೇಕ್ಷೆ ವಲಂ ॥ 727

ಲಕ್ಷ್ಯಂ ॥

ವಿರೋಧಕ್ಕೆ ॥

ಕಂ ॥ ಮರದುಱುಗಲ ಕತ್ತಲೆಯುಂ ।
ಪರಿಕಲಿಸಿ ಪೊದೞ್ದ ಶೋಣಮಣಿದೀಧಿತಿಯುಂ ॥
ನೆರೆದಿರ್ದ್ದುವೊಂದನೊಂದೊ ।
ತ್ತರಿಗಲ್ ನೆಱೆ ನೆಱೆಯಮೀಮಹೀಧರತಟದೊಳ್ ॥ 728

ಘನಜಘನಂ ತನುತನು ನಿ ।
ಮ್ನನಾಭಿ ತುಂಗಸ್ತನಂ ವಿನೀಲಿಮಕೇಶಂ ॥
ಕನದರುಣದ[2]ಶನವಸನಂ ।
ಮಾ[3]ನದೊಳ್ ಭಾವಿಸೆ ವಿರುದ್ಧಮಿವಳಾಕಾರಂ ॥ 729

1 ವಿಶೇಷ್ಯಮಾ, ವಿಶೇಷ್ಯಮುಂ. 2 ರಂಗ. 3 ಮಾನಕ್ಕೆ.

ವೃ ॥ ದಶರಥನಾಗಿಯುಂ ದಶಸಹಸ್ರರಥಂ ರವಿವಂಶನಾಗಿಯುಂ ।
ಶಶಧರಕೀರ್ತ್ತಿರೂಪನಿನನಾಗಿಯುಮಸ್ತಮಯಾಪವರ್ಜ್ಜ ಕ ॥
ರ್ಕ್ಕಶಬಲನಾಗಿಯುಂ ಮೃದುವಪುಃಪ್ರಸರಂ ಮತಿತೀವ್ರನಾಗಿಯುಂ ।
ಪ್ರಶಮಿತಚಿತ್ತನೆಂತುಮವಿರುದ್ಧಗುಣಂ ಗುಣವಜ್ಜನಸ್ತುತಂ ॥ 730

ಅತಿಸೂಕ್ಷ್ಮೇಕ್ಷಣನೆಂತುಮಂಧನಸತೀಸೌಂದರ್ಯ್ಯದೊಳ್ ಸ[1]ತ್ಕ್ರನಾ ।
ನ್ವಿತನೆಂತುಂ ಪೆಱವಂ ಮಹಾಜಿಮುಖದೊಳ್ ನಿ[2]ರ್ಣ್ಣೀತಸವ್ಯಗ್ಬಹು ॥
ಶ್ರುತನೆಂತುಂ ಬಧಿರಂ ಕರಂ ಪರಪರೀವಾದಂಗಳೊಳ್ ನೋೞ್ಪೊಡ ।
ದ್ಭುತಮಾಶ್ಚರ್ಯ್ಯಮಭೂತಪೂರ್ವ್ವಮೆಸಕಂ ಶ್ರೀಗಂಡಮಾರ್ತ್ತಂಡನಾ ॥ 731

ಉತ್ಪ್ರೇಕ್ಷೆಗೆ ॥

ವೃ ॥ ಇರದೆ ನಿತಂಬಮೆಂಬಹಿನಿವಾಸದಿ[3]ನೀಕೆಯು ರೋಮರಾಜಿಯೆಂ ।
ಬುರಗನಳುರ್ಕ್ಕೆಯಿಂ ಮೊಗಮನೊಪ್ಪುವ ಚಂದ್ರನೆಗೆತ್ತು ಕೋಪದಿಂ ॥
ಬರೆ ಬರಲೀಯದತ್ತ ಮೊಲೆಗಳ್ ತಡೆದಿರ್ದ್ದಪುವೆಂದು ಪಚ್ಚುರ್ವಂ ।
ತಿರೆ ಕಿವಿಯೊಳ್ ಬೆಡಂಗಿಡಿದು ತೋರ್ಕ್ಕುಮಪಾಂಗದ ನೋಟಮಾಕೆಯಾ ॥ 732

ಕಂ ॥ ಎಳೆಯಳ ಮೊಗದ ನೆೞಲ್ ತ ।
ಮ್ಮೊಳಗಿರೆ ಸಂತಸದೆ ಬೀಗಿದಂತಿರ್ದ್ದ ಕುಚಂ ॥
ಗಳ ಮಱೆಯೊಳ್ ಕಾಣದೆ ಮೊಗ ।
ದಳಮಂ ನಡು ನೆನೆದು ಬಡಬಡಾದಂತಿರ್ಕ್ಕುಂ ॥ 733

ವಾಸರಪತಿ ಬಿಸುಗದಿರಿಂ ।
ಪೇಸದೆ ತವೆ ಪೀರ್ಗ್ಗುಮೆಂಬ ಮಱುಕದಿನಂಭೋ ॥
ಜಾಸನನಂಬುಜವನಮಂ ।
ಬಾಸಣಿಸಿದನೆನಿಪುವೆಸೆವ ತಾವರೆಯೆಲೆಗಳ್ ॥ 734

ನೀಲಿಯು ರ[4]ಸದೊಳ್ ಕರಡಿಯು ।
ತೋಲಂ ತೊ[5]ಯ್ದುರ್ದ್ದು ಮಸಿಯೊಳದೞೊಳ್ ಪುದಿದ ॥
ತ್ರೈಲೋಕಮಕ್ಕುಮೆನಿಸಿ ।
ತ್ತಾಲೋಕವಿರೋಧಿ ಬಹಳತಮಸಂತಮಸಂ ॥ 735

## ಸೂತ್ರಂ ॥ 172 ॥

ಕ್ರಿಯೆಯುಂ ಪ್ರತಿಷೇಧಂಗೆಯೆ ।
ವಿಭಾವನೆ. ನಿಯತಫ[6]ಳವ್ಯಕ್ತಿಯುದು ವಿಭಾವನೆಯೇಕಾ ॥
ತಿರೋಹಿತಂ. ಶ್ರಯುಮನದೊಂದಂ ಗುಣದತಿ ।
ಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ ॥ 736

1 ವಿಶ್ರುವಾ. 2 ನಿರ್ಣ್ಣೀತ. 3 ದೋಷೀಕೆಯು. 4 ರಸದಿಂ. 5 ತೊಯ್ದುಱ್ದು. 6 ಪದವ್ಯಕ್ತಿಯುದ.

ಲಕ್ಷ್ಯಂ ||

ವಿಭಾವನೆಗೆ ||

ವೃ || ಸಮಱದೆ ಕೊಂಕಿ ನೀಳ್ದಸಿಯ ಪುರ್ವ್ವುಗಳೆಚ್ಚದೆ ನಾಡೆಯುಂ ಬೆಡಂ |
ಗಮರ್ದಸಿತಾಕ್ಷಿಯುಗ್ಮಮಡಿಯೂಡದೆ ಕೆಂಪೆಸೆದಿರ್ದ್ದ ಕೆಂದಳಂ ||
ಭ್ರಮರಕುಳಪ್ರಭಾ[1]ಸಿ ಕುಟಿಲಾಲಕಮೊತ್ತದೆಯುಂ ನಿಸರ್ಗ್ಗದಿಂ |
ತಮಗೆನೆ ಗಾಡಿ ಕೆಯ್ಗ್ಗಱಿಯೆ ಬರ್ಪ್ಪ ಲತಾಂಗಿಯರಾದಮೊಪ್ಪಿದರ್ || 737

ಕಂ || ಅ[2]ಕುಪಿತಕಲುಷಿ ಜಲಮಪಾ |
ನಕಪ್ರಮತ್ತಂ ಶಿಖಂಡಿಸಂತಾನಮಹೀ ||
ತುಕಸುರಭಿ ನೀಪವಿಪಿನಂ |
ಸಕಳಮಹೀತಳಮೊಳಾದುದಂದೊರ್ವ್ವೊದಲೊಳ್ || 738

ತಿರೋಹಿತಕ್ಕೆ ||

ಕಂ || ಇನಿಯನ ವಿಯೋಗದಿಂದಾ |
ದ ನಿನ್ನ ಬಡತನಮನಱಿಯಲಾಗದದಿ[3]ನಿಸುಂ ||
ಘನತರಚಂದ್ರಕಲಾಭಿಷ |
ವನಿಕಾಶಸ್ವತನುಕಾಂತಿಯಿಂ ತರಲಾಕ್ಷೀ || 739

ಕಾಲಿಂದಿಯಸಿ[4]ತಜಲದೊಳ |
ಗೋಲಾಡುವ ಕೃಷ್ಣನಂ ಸವರ್ಣ್ಣತೆಯಿಂ ಗೋ ||
ಪಾಲಕುಮಾರರ್ ನೋಡಿಯು |
ಮಾಲೋಲಮನಸ್ಕರಱಿಯದಾ[5]ಕುಲಮುತ್ತರ್ || 740

## ಸೂತ್ರಂ || 173 ||

ಜನಿಯಿಸೆ ಮುನ್ನಂ ಜನ್ಯಂ |
ಪೂರ್ವ್ವಂ. ಜನಕದಿನದು ಪೂರ್ವ್ವಮೆಂಬುದಕ್ಕುಂ ಮತ್ತಂ ||
ಅಹೇತುಕಂ. ಸ್ವನಿಮಿತ್ತದೊಳಂ ಕಾರ್ಯ್ಯಂ |
ಜನಿಯಿಸದಿರ್ಪ್ಪರವಹೇತುಕಂ ಪೆಸರಕ್ಕುಂ || 741

ಲಕ್ಷ್ಯಂ ||

ಪೂರ್ವ್ವಕ್ಕೆ ||

ಕಂ || ಸಂದಿಸೆ ಗಱಿ ಸಂದಿಸೆ ರಘು |
ನಂದನನೆಡೆಗಿಱಿದು ಕವಿವ ಕಣೆಯಿಂ ಮುನ್ನಂ ||
ಬಂದುದು ನೆಲಕ್ಕೆ ರಿಪುಭಟ |
ವೃಂದಂ ಬೞಿಯುಂ ನಿಶಾತವಿಶಿಖಪ್ರ[6]ಸರಂ || 742

1 ಹಾಸಿ, 2 ಅಕುಟಿಲಕಲುಷ, ಗಕುಟಿಕ, 3 ದಿನಸುಂ, 4 ಯಮುನಾನದಿಯೊಳ್. 5 ರಾಕುಲ. 6 ಪ್ರಕರಂ,

ಕಂ ॥ ಸ್ಮರನ ಶರಂಗಳಿವೆನೆ ತರ ।
ತರದಿಂ ಪೊರೆನೆಗೆದು ಮೆಲ್ಲಮೆಲ್ಲನೆ ಬಱಿಯಂ ॥
ಬಿರಿದುವು ಮಲ್ಲಿಗೆ ಮು[1]ನ್ನಮೆ ।
ಬಿರಿದುವು ಬಿಬ್ಬರನೆ ಬಿರಯಿಜನದಳ್ಳಿರ್ದೆಗಳ ॥ 743

ಅಹೇತುಕಕ್ಕೆ ॥

ಕಂ ॥ ಪೆತ್ತುಂ ತೆಳ್ಪಱಿಯದ ನಡು ।
ಮುತ್ತುಂ ಬೀಱದ ಪಯೋಧರಂ ಮುನಿದುಂ ಚೆ ॥
ಲ್ವೊತ್ತರಿಪ ನಗೆಮೊಗಂ ಮೆ ।
ಯ್ವೆತ್ತಿರೆ ಕರಮೊಪ್ಪಿದಪ್ಪರಲ್ಲಿಮ ಪೆಂಡಿರ್ ॥ 744

ಸಕಲುಷವಿಕೃತಾಶಯುರೊಳ ।
ಮಕೋಪನಂ ಕುಟಿಲವೃತ್ತರೊಳಮತಿಮುಜು ದೂ ॥
ಷಕರೊಳಮರೂಕ್ಷವಚನಂ ।
ಸಕಲಮಹೀವಳಯತಿಳಕನೀಬುಧತಿಳಕಂ ॥ 745

## ಸೂತ್ರಂ ॥ 174 ॥

ಅತಿಬಹಲಸ್ಥಿತಿಯಿಂ ಸಂ ।
ತದ್ಗುಣಂ. ಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ ॥
ಪರಸ್ಪರಾ ಕೃತಕಾರ್ಯ್ಯಕಾರಣಂ ವಿ ।
ಸಂಗತಿಕಂ. ಪ್ರತಿಷಿದ್ಧಮದೆನೆ ಪರಸ್ಪರಾಸಂಗತಿಕಂ ॥ 746

ಲಕ್ಷ್ಯಂ ॥

ತದ್ಗುಣಕ್ಕೆ ॥

ಕಂ ॥ ಯಮುನಾಪಗೆ ಸುರನದಿಯುಂ ।
ಕಮಳೋದರನಿಂದುಮೌಲಿಯುಂ ನೀಲನಗಂ ॥
ಹಿಮಗಿರಿಯುಂ ಪೋಲ್ತಿಪ್ಪಿನ ।
ಮಮಲಯಶೋರುಚಿ ಪೊದಱ್ದಿದಿಳೆಗಿಂದ[2]ರನಾ ॥ 747

ಇದು ಕಿಱಿದಿದು ಪಿರಿದಿದು ಕುಱಿ ।
ಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂ ॥
ಟಿದು ಸಾರೆಯೆಂಬ ನಿರ್ಣ್ಣಯು ।
ಮಪಾದುದಿಲ್ಲೊದವಿ ಪುದಿದ ಮರ್ಬ್ಬಿನೊಳಾಗ್ಗಂ ॥ 748

---

1 ಮುನ್ನಂ. 2 ದಿರನಾ.

ಪರಸ್ಪರಾಸಂಗತಿಕಕ್ಕೆ ||

ಕಂ || ಹಿಮಕುಮುದಕುಂದಶಶಿಧವ |
ಲಮೆನಿಪ ನಿಜಕೀರ್ತ್ತಿಯೆಸಕದಿಂದಮಿಳಾಲೋ ||
ಕಮನೆಯ್ದೆ ರಕ್ತಮಪ್ಪಂ |
ತು ಮಾಡಿದಂ ಕೃಷ್ಣನಿಂತಿದೇನಚ್ಚರಿಯೋ || 749

## ಸೂತ್ರಂ || 175 ||

ವಿಶೇಷೋಕ್ತಿ.

ಒದವಿದ ಸಾಮಗ್ರಿಯೊಳೇ |
ಕದೇಶವೈಕಲ್ಯಮಾ[1]ಗೆಯುಂ ಮತ್ತಂ ತ ||
ತ್ಸದೃಶಫಲಸಿದ್ಧಿಯುಂ ತೋ |
ರ್ಪ್ಪದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ || 750

ಲಕ್ಷ್ಯಂ ||

ಕಂ || ರಥಮೊಂ[2]ದೆಗಾಲಿಯದು ಸಾ |
ರಥಿಯುಪ್ಪೊಡೆ ಪೆಳವನಸಮಮಶ್ವಮವೇೞುಂ ||
ಪ್ರಥಿತಪ್ರತಾಪದಿಂದಂ |
ಮಥಿತಪ್ರತಿಪಕ್ಷನು[3]ದಯಿಯಾದಂ ದಿನಪಂ || 751

ವೃ || ಧನುವುಂ ಕಬ್ಬಿನ ಬಿಲ್ ಗಡಂ ಗೊ[4]ಣೆಯುಮುಂ ನೀರೇಜಸೂತ್ರಂ ಗಡಂ |
ನನೆಗಳ್ ಬಾಣಚಯಂ ಗಡಂತತನು ತಾಂ ಮತ್ತಂ ಮನಂನೊಂ[5]ದು ಸಿ ||
ರ್ಬ್ಬನಿಪಂತಾರ್ದ್ದಿಸುತಿರ್ಪ್ಪನುಚ್ಚೆರ್ದೆರ್ದೆಯೊಳ್ ಪು[6]ಷ್ಪೈತ್ತ್ರೆಂದಿಂತಿದಿ |
ಲ್ಲನಿಸುಂ ಮನ್ಮಥಶಸ್ತ್ರಕಲ್ಪಮಿದು ದಲ್ ಪೇೞೊಂದು ಶಿಕ್ಷಾಕ್ರಮಂ || 752

ಇವು ಅತಿಶಯಭೇದಂಗಳ್ ||

## ಸೂತ್ರಂ || 176 ||

ಎರಡರ್ತ್ಥಮೊಂದೆ ಶಬ್ದಂ |
ಅರ್ತ್ಥಶ್ಲೇಷಂ. ತರದೊಳ್ ನೆಗೞ್ವಂತು ಪೇ[7]ೞ್ವುದರ್ತ್ಥಶ್ಲೇಷಂ ||
ಶಬ್ದಶ್ಲೇಷಂ. ದೊರೆಕೊಳೆ ಶಬ್ದಾವಯವದೊ |
ಳೆರಡಭಿಮತಶಬ್ದಮಱಿಗೆ ಶಬ್ದಶ್ಲೇಷಂ || 753

1 ಮಾಗಿಯುಂ. 2 ಪೊಂದು. 3 ನುದಯಮಾದಂ. 4 ಗೊನೆ, ಗೊಲೆ. 5 ಪೊಂದುವಿ || ರ್ಬ್ಬಿರವಿ.
6 ಪುಷ್ಪೈತ್ರರೆಂದಿಂತಿದೆ | ಲ್ಲನಸುಂ. 7 ಪೇೞಲ್ಪ್ಪುದರ್ತ್ಥ.

## ಸೂತ್ರಂ ॥ 177 ॥

ವೃ॥ ತತ್ವಂ ವ್ಯಾಜಸ್ತುತಿಯುವಯುವ[1]ರ್ಥಂ ವಿ[2]ರೋಧಾವಭಾಸಾ।
ಶ್ಲೇಷ ರ್ಥತ್ವಂ ಮಿಕ್ಕಿರ್ದ್ದಧಿಕಮವಿಶೇಷಾತ್ಮಕಂ ವ[3]ಸ್ತ್ವಸಂಭಾ ॥
ಭೇದಂಗಳ. ವ್ಯತ್ವಂ ವಕ್ರೋಕ್ತ್ಯನುಗತಮುಮೆಂದಿಂತು ತಾತ್ಪರ್ಯದಿಂದಂ।
ತತ್ವಜ್ಞರ್ ವಿಸ್ತರಿಸೆ ನೆಗೞ್ಗುಂ ಶ್ಲೇಷಭಾ[4]ಗಪ್ರಭೇದಂ ॥ 754

ಅಲ್ಲಿ ॥

## ಸೂತ್ರಂ ॥ 178 ॥

ಬ[5]ಗೆಗೆ ಪೆಱತರ್ತ್ಥವೊಂದಂ।
ತತ್ವಂ. ನೆಗೞ್ದಿತುಂ ನೆಗೞ್ಚಿ ತತ್ವವರ್ಣ್ಣನೆ ತತ್ವಂ ॥
ವ್ಯಾಜಸ್ತುತಿ. ತೆಗುಳೆ ಪೞಿವಂ[6]ತೆ ಕೆಯ್ಮಿಗೆ।
ಪೊಗೞ್ವುದು ತಾಂ ವ್ಯಾಜಸಂಸ್ತವಾಖ್ಯಮೆನಿಕ್ಕುಂ ॥ 755

ಲಕ್ಷ್ಯಂ॥

ತತ್ವಕ್ಕೆ॥

ವೃ॥ ವರಗೋಮೇದಕವಿಸ್ಫುರದ್ವ[7]ಸನಸುವೃತ್ತಪ್ರದ್ಮರಾಗೋಲ್ಲಸ।
ಚ್ಚರಣಂ ನೀಲರುಚಿಪ್ರವಾಲಸಿತನೀಷಲ್ಲೋಹಿತಾಕ್ಷಂ ಮನೋ॥
ಹರಮುಕ್ತಾಮಯಪಜ್ಯಸಂಚಸನನೇದಾತೀಮಹಾತ್ಮಂ ನೃಪೇ।
ಶ್ವರರತ್ನಂ ವಿಲಸತ್ಸುವರ್ಣ್ಣದೊಳೆವತ್ತಿರ್ಕ್ಕುಂ ಭವತ್ಸಂಗದಿಂ॥ 756

ವ್ಯಾಜಸ್ತುತಿಗೆ॥

ಕಂ॥ ವಾತಿ ಪರವೆಣ್ಣ ಕರಙು।
ಯಾ[9]ತಂಗಸುರಂ ಬಿ[10]ಯುಕ್ಕೆ ಗುಪ್ತಂ ರಿಪು ಸಂ॥
ಘಾತಕ್ಕೆ ಪರಾಕ್ರಮುನೆ[11]ನೆ।
ಭೂತಲಮೇನೆಂದು ಕೇಳಿಯುಂ ಬಣ್ಣಿಪುದೋ॥ 757

ಜೋಡೆ ಕರಮು[12]ಡಿಯುಳಾರೊಡ।
ಗೂಡಿಯುಮುವರ್ಗಲ್ಲಳೆನಿಪ ವಸುಧಾಂಗನೆಯಂ॥
ಕೋಡೊಳೆ ತಳೆದುಂ ಸೊಬಗಿನ।
ಗಾಡಿಗೆ ಮು[13]ಯ್ಯಾಂತ ಸೊಬಗಿದಾವು[14]ದು ಗಜೆಗಾ॥ 758

---

1 ವಿಶ್ವಂ. 2 ವಿರುದ್ಧಾ. 3 ವಸ್ತುಸಂಭಾ. 4 ಭೇದ. 5 ಬಗೆವಿಲೆಯುತುಂ ಪೆವೊಂದುಂ. 6 ವನಿತೆ. 7 ವ್ರತನ. 8 ಮಣಿ. 9 ಯಾತಕ್ಕುಸುರಂ. 10 ಪ್ರಯುಕ್ತೆ. 11 ಮಾನೆ. 12 ಮುಡಿಯೊಳಗು. 13 ಮುಯ್ಯಾಂತ. 14 ವುದೋ.

## ಸೂತ್ರಂ ॥ 179 ॥

ಅವಯವಮುಖದಿಂ ಸಮುದಾ ।
ಅವಯವಂ. ಯವಿಶೇಷಣಮನ್ಯವಸ್ತುಗಮಕಮ[1]ದಾದಂ ॥
ವಿರೋಧಾ ದವಯವಮವಿರುದ್ಧಂ ನೋ ।
ಭಾಸಂ. ಡೆ ವಿರುದ್ಧಸ್ಥಿತಿಯೊಳಿರೆ ವಿರುದ್ಧಾಭಾಸಂ ॥ 759

ಲಕ್ಷ್ಯಂ ॥

ಅವಯವಕ್ಕೆ ॥

ಕಂ॥ ಬಳಭದ್ರಂ ಭುಜದೊಳುರ ।
ಸ್ಥಳದೊಳ್ ಪೃಥು ವಿತತಯಶದೊಳರ್ಜ್ಜುನನೀತಂ ॥
ಕಲಿಕಾಲದೊಳಂ ತನ್ನೊಳ್ ।
ತಳೆದಿರ್ದ್ದಂ ಪೂರ್ವ್ವಭೂಮಿಪಾಲಸ್ಥಿತಿಯಂ ॥ 760

ವಿರೋಧಾಭಾಸಕ್ಕೆ ॥

ಕಂ॥ ಅನುಗತಕರ್ಣ್ಣಂ ಕೃಷ್ಣಾ ।
ರ್ಜ್ಜುನಾನುರಕ್ತಂ ವಿಲೋಚನಂ ದೋರ್ದ್ದಂಡಂ ।
ಘನದೃಢಬಲಂ ಪ್ರಲಂಬಂ ।
ತನಗೆನೆ ಪಿರಿದುಂ ವಿರುದ್ಧಮೀನ್ನೃಪನಂದಂ ॥ 761

## ಸೂತ್ರಂ ॥ 180 ॥

ಆರಬ್ಧಕ್ಕಧಿಕಮಸಾ ।
ಅಧಿಕಂ. ಧಾರಣಗುಣಮಧಿಕಮೆಂಬುದಕ್ಕುಂ ಸದೃಶಾ ॥
ಅವಿಶೇಷಂ. ಕಾರವಿಶೇಷಣಮರ್ತ್ಥಮು ।
ದಾರಂ ಬೇಱೊಂದು ತೋರ್ಪ್ಪೊಡವಿಶೇಷಾಖ್ಯಂ ॥ 762

ಲಕ್ಷ್ಯಂ ॥

ಅಧಿಕಕ್ಕೆ ॥

ಕಂ॥ ಅಂಗುಳೊಳಡಸಿದ ವಿಷಮುಂ ।
ಭಂಗುರತರವಿಷಮದೃಷ್ಟಿಯುಂ ವ್ಯಾಳಸಮಾ ॥
ಸಂಗಮುಮಮರ್ದ್ದಿರೆ ಮದನಹ ।
ರಂಗೆಣೆಯೆನಿಪುದಱಿನೆಮಗೆ ಖಳರಭಿವಂದ್ಯರ್ ॥ 763

1 ದೊಳಮರ್ದಂ.

ಅವಿಶೇಷಕ್ಕೆ ||

ಕಂ|| ಗುರುಪರಿಣಾಹಂಗಳ ಪೀ |
ವರಂಗಳುನ್ನತಿಯುತಂಗಳುರ್ವ್ವರೆಗೆ ಮನೋ ||
ಹರಕುಚಮಂಡಳದಂತಿರೆ |
ಕರಮೆಸೆವುವು ವಿಮಳದರ್ದ್ದುರಾದ್ರಿಗಳೆರಡುಂ || 764

## ಸೂತ್ರಂ || 181 ||

ಪೆಸರೊಳಸಂಭವಮೆನಿಸುಗು |
ಅಸಂಭವಂ. ಮಸಂಭವಂ ತದ್ವಿಶೇಷಣಂ ಪೃಥಗರ್ತ್ಥಂ ||
ವಕ್ರೋಕ್ತಿ. ಪೊಸಯಿಸೆ ಭಿನ್ನರಸಂ ಸು |
ಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ || 765

ಲಕ್ಷ್ಯಂ ||

ಅಸಂಭವಕ್ಕೆ ||

ಕಂ|| ಅನ್ವಷಚ್ಛೇದನನತಿಧವ |
ಳವರ್ಣ್ನನುತ್ಸಾರಿತಾರಿ ಬೇಱೊರ್ವ್ವಂ ದಾ ||
ನವಮಥನನೀತನೆನಿಸಿದ |
ನವನಿಗೆ ಪುರುಷೋತ್ತಮಾನುಭಾವಂ ಕೃಷ್ಣಂ || 766

ವಕ್ರೋಕ್ತಿಗೆ ||

ಕಂ|| ವೀರರಸಪ್ರ[1]ದಚಾರಣ |
ಮಾರಣಸಂಪ್ರಾಪ್ತಕೌಶಲಂ ಭಾವಿಸೆ ರಂ ||
ಭೋರು ನರೇಂದ್ರತೆಯುಂ ವಿ |
ಸ್ತಾರಿಸಿದಪನಂಗನಂಗಸಿದ್ಧಿಯೊಳೀತಂ || 767

## ಸೂತ್ರಂ || 182 ||

ಪದವರ್ಣ್ನವಿಭಕ್ತಿವಿಭಾ |
ಗದಿಂ ದ್ವಿಧಾರೂಪಮಿಷ್ಟಮು[2]ಕ್ಲಿಷ್ಟಂ ಶ ||
ಭಂಗಶ್ಲೇಷಂ. ಬ್ದದೊಳಾಗಿ ತೋ[3]ಱುವಂದಂ |
ತದು ಭಂಗಶ್ಲೇಷಮೆಂದು ಪೇೞಲ್ಪಡೆಗುಂ || 768

ಲಕ್ಷ್ಯಂ ||

ಕಂ|| ಸ್ವಗತಾನಲಸನ್ಮಣಿರ |
ಶ್ಮಿಗಾಢಮಗಣಿತಜ[4]ಲದ್ವಿಪಾವಳಿ ಕಡಲಂ ||
ಮಿಗೆ ವಂದಮರಗಜೇಂದ್ರಂ |
ಸೊಗಯಿಸುವು[5]ದು ದಾನವಾರಿಲೇಖಾನುಗತಂ || 769

1 ಪ್ರವಿಚಾರಣ. 2 ಮಾಕ್ಲಿಷ್ಟಂ. 3 ತೋರ್ಪ್ಪಕೆಱವಂ. 4 ಜಗದ್ವಿ. 5 ಗುಂ.

## ಸೂತ್ರಂ ॥ 183 ॥

ಸಂಶ್ಲೇಷಂ.

ಯೋಗಂ ಪಲವುಮಲಂಕೃತಿ ।
ಗಾಗಿರೆ ಸಂಶ್ಲೇಷಮೆಂಬುದನ್ವರ್ತ್ಥಗತಂ ॥
ಯೋಗಮುಮಂಗಾಂಗಿಪ್ರವಿ ।
ಭಾಗಂ ಸಮಕಕ್ಷಮೆಂದೆರೞ್ತೆಱನಕ್ಕುಂ ॥ 770

ಲಕ್ಷ್ಯಂ ॥

ವೃ ॥ ಸ್ವಭಾವಗಂಭೀರನಲಂಘ್ಯವೈಭವಂ ।
ಪ್ರಭೂತರತ್ನಂ ನೃಪನಂಬುರಾಶಿವೋಲ್ ॥
ವಿಭೀಷಣಗ್ರಾಹಮವೃಷ್ಯಮರ್ಣ್ಣವಂ ।
ಪ್ರಭೂತಸಾರಂ ಸುಖಸೇವ್ಯನೀನೃಪಂ ॥ 771

## ಸೂತ್ರಂ ॥ 184 ॥

ಪ್ರೇಯಂ. ಊರ್ಜ್ಜಸ್ವಿ. ಆಶಿ.

ಪ್ರೇಯಂ ಪ್ರಿಯತರವಚನಾ ।
ಶ್ರೇಯಮುಮಹಂಕಾರಗರಿಮಮೂರ್ಜ್ಜಸ್ವಿ ಶುಭ ॥
ಪ್ರಾ[1]ಯಾರ್ತ್ಥಶಂಸಾಭಿ ।
ಪ್ರಾಯಮುಮಲಂಕಾರಮಾಶಿಯೆಂಬರ್ ಕೆಲಬರ್ ॥ 772

ಲಕ್ಷ್ಯಂ ॥

ಪ್ರೇಯಕ್ಕೆ ॥

ಕಂ ॥ ನೆಲನನವಯವಪೆ ತಳರದೆ ।
ನಿಲೆ ತಾಳ್ದಿದ ಮೆಯ್ಗ್ಮೆಲ್ಲಮಾನಲ್ಕರಿದಾ ॥
ಯ್ತುಲಘುಪ್ರಸಾದದಿಂ ನೀ ।
ನೊಲಿದೆತ್ತಿರೆ ಮ[2]ನೆಗೆ ಮನದೊಳಾದನುರಾಗಂ ॥ 773

ಊರ್ಜ್ಜಸ್ವಿಗೆ ॥

ಕಂ ॥ ಕೆ[3]ಳದೀ ಬಿಲ್ಲುಮನಂಬುಮ ।
ನಳೀಕಭಟವಿಕಟವೇಷಮುಂ ಬಿಸುಟೀಗಳ್ ॥
ಮುಳಿಯಿಸದೆನ್ನಂ ಮುಗುಱ್ದುಂ ।
ಬಳಿದೊಟ್ಟೊಡೆ ಗೆಲ್ವಯುಂಬುದೊಟ್ಟೊಡೆ ಗೆ[4]ಲ್ಲಮೆ ॥ 774

ಆಶಿಗೆ ॥

ಕಂ ॥ ನೆಲೆಗೊಳ್ಗೆ ನಿಜಭುಜಾಸಿಯೊ ।
ಳೊಲಿದು ಜಯಾಂಗನೆ ವಿರೋಧಿವಂಶಾವಳಿಯುಂ ॥
ನೆಲೆಗಿಡಿಸಿ ನಿನ್ನತೇಜೋ ।
ಜ್ವಲನಂ ತಳ್ತುಱ್ಕೆಕೊಳ್ಗೆ ವಿಕ್ರಮತುಂಗಾ ॥ 775

1 ಪ್ರಿಯಾರ್ತ್ಥಶಂಸಾಭಿ. 2 ಮನಕೆ. 3 ಕಳಲದೆ. 4 ಗೆಲ್ವುದು.

## ಸೂತ್ರಂ ॥ 185 ॥

ಭಾವಿಕಂ.

ಭಾವಿಕವೆಂದರೆಬರ್ ಕವಿ ।
ಭಾವಗತಾರ್ಥಮ[1]ನ ತಾಮಲಂಕೃತಿಗ[2]ಳೊಳು ॥
ದ್ಭಾವಿಸಿ ಪೇೞ್ವರ್ ಶಕ್ತಿಸ ।
ಮಾವಿರ್ಭೂತಪ್ರಬಂಧವಿಷಯಮದಕ್ಕುಂ ॥ 776

## ಸೂತ್ರಂ ॥ 186 ॥

ಸ್ಥಾನೋಪವರ್ಣ್ಣನಂ ಶ ।
ಬ್ದಾನಾಕುಳಭಾವಮುದ್ಭುತಾರ್ಥತ್ವಂ ಸ್ವಾ ॥
ಧೀನರಸವೃತ್ತಿ ಸಂಬಂ ।
ಧಾನುಗಮುಂ ಭಾವಿಕಕ್ಕೆ ಭಾನಮಿವಕ್ಕುಂ ॥ 777

ಇದು ಗುಣವಿವೇಕದೊಳ್ ಅರ್ಥಾಲಂಕಾರಪ್ರಕರಣಂ
ತೃತೀಯಂ.

---

ಗೀತಿಕೆ॥ ಈತೆಱದಿಂದರ್ಥಾಲಂಕೃತಿ ।
ಯೋ[3]ತು ವಿಭೇದಮನಾದಮೆಲ್ಲಮಂ ॥
ನೂತನಮಾರ್ಗ್ಗಮೊಸೆಯೆ ಪೇ[4]ೞ್ದಂ ।
ಖ್ಯಾತಯಶಂ ಕವಿತಾಗುಣೋದಯಂ ॥ 778

ವೃ॥ ಶ್ರುತದೇವೀಮುಕರಂದಕಲ್ಪಲಪನಂ ಸಾಕ್ಶ್ರೀನಿವಾಸಾಂಬುಜಾ ।
ಯಿ[5]ತವಕ್ತ್ರಂ ರಸಭಾವಭಾಸುರಸಮುದ್ಯದ್ಭಾರತೀನರ್ತ್ತನೋ ॥
ಚಿತರಂಗಪ್ರತಿಮಾನನಂ ಪ್ರವಿಲಸದ್ವಾಕ್ಸುಂದರೀಕುಂಕುಮಾಂ ।
ಕಿತಕೇಳೀಭವನಾಜಿರೋಪಮಮುಮುಬಂ ಭೂಭಾಗದೊಳ್ ಸಾಕಿಗಂ ॥ 779

ಇದು ಸಕಲಸುಕವಿಜನಮನಸ್ಸರೋಜಿನೀರಾಜಹಂಸಾ
ಯಮಾನಾನೂನಕವಿತಾಗುಣೋದಯಂ ಶ್ರೀನಾ
ಗವರ್ಮ್ಮವಿರಚಿತಮಪ್ಪ ಕಾವ್ಯಾವಲೋ
ಕನದೊಳ್ ಗುಣವಿವೇಕಮೆಂಬುದು
ತೃತೀಯಾಧಿಕರಣಂ.

---

1 ಮನೆ. 2 ಯೊಳಗು. 3 ಯೆಂತುಮಪೇತವಿಚ್ಛೇದಮನಾದ್ಯನುಪ್ಲವಂ, ಯಂತುಮಾತವಿಭೇದಮನಾದವಲ್ಲಂ. 4 ಪೇೞ್ವಂ. 5 ಯುತ.

ಲಕ್ಷ್ಯಂ ॥

ವೃ ॥ ಇನಿಮನ ಕೆಂದಳಂ ತಳವನೊಯ್ಯನೆ ಸೋಂಕೆ ಪೊದಳ್ದ ನಾಣ ಪೆಂ।
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬ ॥
ಳ್ಜನೆ ಬಸಿಯುತ್ತುಮಿಂದುಕರಸಂಕುಳಮೊಯ್ಯನವುಂಕಿ ಸೋಂಕೆ ಸೋಂ।
ಕಿನೊಳೊಸೆವಿಂದುಕಾಂತಮಣಿಪುತ್ರಿಕೆಯಂದದಿನಾ[1]ದವೊಪ್ಪಿದಳ್ ॥ 785

## ಸೂತ್ರಂ ॥ 191 ॥

ಗೌಡರೀತಿ.

ಅತಿದೀರ್ಘಸಮಾಸಾಂಚಿತ।
ಗತಿ ಶಬ್ದಾಡಂಬರಾನುವಿದ್ಧಂ ಕ್ರೋ[2]ಧಾ ॥
ದ್ಭುತರೌದ್ರವೀರರಸಸಂ।
ಗತಮಂತದು ಗೌಡರೀತಿ ಪೌ[3]ರುಷಪ್ರಾಯಂ ॥ 786

ಲಕ್ಷ್ಯಂ ॥

ವೃ ॥ ವಂ[4]ಗಾಂಗಾಂಧ್ರಕಳಿಂಗಕೊಂಗವಿ[5]ಸರತ್ಪಾದಾತಪಾಳೀನಮು।
ದ್ರಂಗತ್ತುಂಗತುರಂಗಭಂಗುರತರಂಗಾಕೀರ್ಣಮುಚ್ಛೃಂಖಳೋ ॥
ತ್ತುಂಗೋನ್ಮತ್ತಮತಂಗಜಪ್ರಕರಮಾದಸ್ಸಂಕುಳಂ ಕೂಡೆ ನೋ।
ಟ್ಟಂಗಂದದ್ಭುತಮಾಗಿ ತೋಱುವು ಮಸಗಿತ್ತು ವೈರಿಸೈನ್ಯಾರ್ಣವಂ ॥ 787

## ಸೂತ್ರಂ ॥ 192 ॥

ಕಾರುಣ್ಯಂ ಹಾಸ್ಯಂ ಶೃಂ।
ಗಾರಮಿವಿನಿತಱೊಳ[6]ಮಕ್ಕೆ ವೈದರ್ಭ ಮನೋ ॥
ಹಾರಿಪ್ರಳಯಾದ್ಭುತರಸ।
ವೀ[7]ರರಸಂಗಳ್ಗೆ ಪೇರ್ಚುಗೆ ಪಾಂಚಾಳಿಕೆಯುಂ ॥ 788

## ಸೂತ್ರಂ ॥ 193 ॥

ಎಸೆಗುಂ ರೌದ್ರಭಯಾನಕ।
ರಸಬೀಭತ್ಸೋಕ್ತಿ ಗೌಡರೀತಿಯಿನದಱೊಳ್ ॥
ಪೊಸಯಿಸುಗುಂ ಮೇಣ್ ನಿಸದಂ।
ರಸವತ್ವಮತಿಪ್ರತೀತಿ ವೃ[8]ತ್ತ್ಯಾಶ್ರಯದಿಂ ॥ 789

---

1 ನೊಪ್ಪಿತೋಱುಗಿದಳ್. 2 ಕ್ರೋಧೋತ್ಪನ್ನ. 3 ಪ್ರರುಷ 4 ವಂಗಿಸಿಂಗಕಳಿಂಗ. 5 ಪಳಸ.
6 ಳಮಕ್ಕೆವೈದರ್ಭ್ಯಮನೋ. 7 ವೀರರಸ್ಯಂಗಳ್ಗೆ. 8 ವೃತ್ತಿ.

### ಸೂತ್ರಂ ॥ 194 ॥

ಅರೆಬರ್ ದೀರ್ಘಸಮಾಸಂ ।
ಬೆರಸಿರೆ ಶೃಂಗಾರರಸಮುಮಂ ಪೇಳ್ವರ್ ಬಿ ॥
ತ್ತರಿಸುವರಸಮಾಸಪದಾಂ ।
ತರಂಗಳೊಳಗುಚಿತಮಾಗಿ ರೌದ್ರಾದಿಯುಮಮಂ ॥ 790

ಲಕ್ಷ್ಯಂ ॥

ಶೃಂಗಾರರಸಕ್ಕೆ ॥

ವೃ ॥ ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ ।
ರವಝುಂಕಾರಿತಚಾರುವಾಮಚರಣಾಘಾತಂ ಚಳದ್ಭ್ರೂಲತಾ ॥
ಗ್ರವಿಭಾಗೋತ್ಕಟತರ್ಜನಂ ತರಳತಾತಾಮ್ರಾಧರಂ ಚಕ್ರಗಿ ।
ತ್ತವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಮಾ ॥ 791

ರೌದ್ರಾದಿಗೆ ॥

ಇರದೆಂಟುಂ ದಿಗ್ಗಜಂಗಳ್ ನೆರೆದಿರದಿದಿರಂ ತಾಗೆಯುಂ ಮಂದರಕ್ಷ್ಮಾ ।
ಧರದೊಳ್ ಕೆಯ್ಯೊಡ್ಡಿ ಗೋತ್ರಾದ್ರಿಗಳ್ ಗಜಘಟಾರೂಪದಿಂ ತಾಗೆಯುಂ ಮ ॥
ತ್ತರಿ ತಾಂಗಲ್ ತಾನೆ ಸೋಲ್ಗಂ ಪೆಱಪೆಱವು ಘಟಾಬಂಧಮೋಂ ಭಂಡಮೊಂದೂಂ ।
ದು ರಣೋತ್ಸಾಹಂ ಮಾನಕ್ಕುಬ್ಬರಿಸಿರೆ ಸಮರಾಟೋಪಮಂ ತಾಳ್ದಿ ನಿಂದಂ ॥ 792

ಇದು ರೀತಿಕ್ರಮರಸನಿರೂಪಣದೊಳ್ ರೀತಿಪ್ರಕರಣಂ ಪ್ರಥಮಂ ॥

## ರ ಸ ಪ್ರ ಕ ರ ಣ ಂ.

### ಸೂತ್ರಂ ॥ 195 ॥

ಶೃಂಗಾರಾದಿಗಳಪ್ಪ ರ ।
ಸಂಗಳ್ ವರ್ತಿಸುಗುಮಂ[1]ತವೆಂಟೆ ವಲಂ ಕಾ ॥
ವ್ಯಾಂಗಕ್ಕೆ ಸತ್ಕ್ರಿಯಾರೂ ।
ಪಂಗಳ್ ರತ್ಯಾದಿಭಾವಸಂಪನ್ನಂಗಳ್ ॥ 793

### ಸೂತ್ರಂ ॥ 196 ॥

ಸ್ಥಾಯಿಭಾವಂ.

ರತಿ ಪರಿಹಾಸಂ ಶೋಕಕೋ ।
ದ್ಧತಮುತ್ಸಾಹಂ ಭಯಂ ಪ್ರಕೋಪಂ ವಿಜುಗು ॥
ಪ್ಸತೆ ವಿಸ್ಮಯಮಾಶಯುತ್ವಂ ।
ಪ್ರತಿನಿಯತಸ್ಥಾಯಿಭಾವಮಿವು ತಾಮಕ್ಕುಂ ॥ 794

1 ಮಾತ್ರವೆಂಟುಮಲ್ಲ.

## ಸೂತ್ರಂ ॥ 197 ॥

ವೃ॥ ಮತಿನಿರ್ವೇದಾವಹಿತ್ಥಶ್ರಮಮದಜಡತಾಗ್ಲಾನಿಚಿಂತೋಗ್ರತೇರ್ಷ್ಯಾ ।
ಸಂಚಾರಿ ಧೃತಿನಿದ್ರಾವೇ[1]ಗಶಂಕಾತ್ರಸನಚಪಲತಾಲಸ್ಯಸು[2]ಪ್ತಾವಬೋಧ ॥
ಭಾವಂ. ಸ್ಮೃತಿಗರ್ವಾಮರ್ಷದೈನ್ಯೌತ್ಸುಕರತಿಮುದಪಸ್ಮಾರಲಜ್ಜಾವಿಷಾದ ।
ಸ್ಥಿತಿಚಿತ್ತಭ್ರಂಶಮೋಹಾಮಯಮೃತಿಗಳಿವಿಂತೆಯ್ದು ಸಂಚಾರಿಭಾವಂ ॥
795

## ಸೂತ್ರಂ ॥ 198 ॥

ಸ್ವೇದಂ ವೈವರ್ಣ್ಯಂ ಸ್ವರ ।
ಸಾತ್ವಿಕಭಾವಂ. ಭೇದಂ ರೋಮಾಂಚನಂ ಪ್ರಕಂಪನಮಶ್ರು ॥
ದ್ಭೇದಂ ಸ್ತಂಭಂ ಲಯಮೆಂ ।
ದಾಮಿವೆಂಟುಂ ರಸಕ್ಕೆ ಸಾತ್ವಿಕಭಾವಂ ॥ 796

## ಸೂತ್ರಂ ॥ 199 ॥

ಭಾವಂ ಬಹಿರರ್ಥಸಮು ।
ದ್ಭಾವಿತಮನುಭವಭವಂ ವಿಭಾವಂ ರಸಸ ॥
ದ್ಭಾವವಿಹಿತಾಭಿನಯಮನು ।
ಭಾವಂ ಸಂಚಾರಿಭಾವಮನವಸ್ಥಿ[3]ತಿಕಂ ॥ 797

## ಸೂತ್ರಂ ॥ 200 ॥

ಭಾವಂ ವಿಭಾವಮೆಸೆವನು ।
ಭಾವಂ ಸಂಚಾರಿಭಾವಮೊಂದಿಂತಿವಱಿಂ ॥
ದಾವಿಷ್ಕೃತಮಕ್ಕುಂ ರಸ ।
ಮಾವುದುಮೊಂದಱಿಗೆ ಭರತಶಾಸ್ತ್ರಕ್ರಮದಿಂ ॥ 798

## ಸೂತ್ರಂ ॥ 201 ॥

ಸ್ತ್ರೀಪುಂಸರತಿಸಮುತ್ಥ ।
ಶೃಂಗಾರಂ. ವ್ಯಾಪಾರಂ ತಾನದಲ್ತೆ ಶೃಂಗಾರಂ ಮೇ ॥
ಳಾಪದಿನಗಲ್ಕೆಯಿಂ ಸುನಿ ।
ರೂಪಿತಸಂಭೋಗವಿಪ್ರಲಂಭಸಮಾಖ್ಯಂ ॥ 799

---

1 ವೇಶ. 2 ಸುಪ್ತೋವಬೋಧ, ಸುಪ್ತೋಹಬೋಧ. 3 ಸ್ಥಿತ.

ಲಕ್ಷ್ಯಂ॥

ಸಂಭೋಗಶೃಂಗಾರಕ್ಕೆ ॥

ವೃ ॥ ಪದೆಯಿಸೆ ಸೊಂಕೆ ಸಂ[1]ಕೆ ಗಿಡೆ ಮೇೞಿಸಿ ಮೆಯ್ವಿಡೆ ತಳ್ತು ತೋಳ ತ |
ಳ್ಪಿದಿಗೊರ್ಳೆ ಮೆಲ್ಲನಪ್ಪಿ ಮೊಗಮಿ[2]ತ್ತಿರೆ ಚುಂಬಿಸ ಸೋಲ್ತು ನಾಣನೊ ॥
ಕ್ಕುದನಜುಬಿದಿಕ್ಕೆ ಕಾತ್ತರ್ನದ ಲಲ್ಲೆಗಳಂ ನುಡಿದಂತಲಂಪಿನು |
ಬ್ಬಿದಿಗಮನಾಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ ॥ 800

ಇದು ಮು[3]ಗ್ಧಸಮಾಗಮಂ ॥

ವೃ ॥ ಬಗೆವೊಳ್ ಪೊಣ್ಮುವಲಂಪು ಕಾ[4]ತರತೆಯುಂ ತಂದೀಯೆ ಮೆಯ್ಮಯ್ಯ ಸಂ |
ದುಗಳೇನಪ್ಪೊಡಮಿಲ್ಲದಂತಮರ್ವಿನಂ ತಳ್ತಪ್ಪಿ ಬಾಯೂಟದೊಳ್ ॥
ಮಿಗೆ ಪೀರ್ವಂತೆ ಮ[5]ನೋಜರಾಗರಸಮಂ ಮೆಯ್ಬೆರ್ಚಿ ಕಾದಲ್ಮೆ ಕೆ |
ಯ್ಮಿಗುವನ್ನಂ ನೆರೆದರ್ ಮ[6]ನಂ ತಣಿವಿನಂ ನಾನಾರತಪ್ರಾ[7]ಢಿಯಿಂ ॥ 801

ಇದು ಮಧ್ಯಸಮಾಗಮಂ ॥

ವೃ ॥ ಕುಟಿಲಾನೀಲಾಳಕಂಗಳ್ ನಿಮಿರ್ದಿರೆ ಬೆಳರ್ವಾಯ್ಮೆನಾಡೆಯುಂ ಬೀಗೆ ರೋ[8]ಷೋ |
ತ್ಕಟದೇಪಂ ರಾಗದಿಂ ಪಿಳ್ಳನೆ ಪೆಱುದಪ್ಪೊಲಿಂಬಾಗೆ ಸೀಳ್ದ[9]ಳವಾಳಂ ॥
ವಿಟವೃತ್ತಂ ಮೆಯ್ಯೊಳೆತ್ತಂ ಪಸರಿಸಿರೆ ವಿಟಂ ಬೀಸೆ ಸಿಂದಿರ್ದ್ದಳೊರ್ವ್ವಳ್ |
ಸ್ಫುಟಿತೋರೋಮಧ್ಯ ಭಿನ್ನಾವಟುತಟವಿಪಟದ್ಗ್ರಂಥಿನಿಗ್ರಂಥದಿಂದಂ ॥ 802

ಇದು ಪ್ರಾಢಸಮಾಗಮಂ ॥

ವೃ ॥ ಕಡೆಗಣ್ಣಿಂ ಕಡೆಗೋಡಿಪ್ರೋಗೆ ಪಿರಿದುಂ ಚಲ್ಲಂ ಕುಚದ್ವಂದ್ವದಿ |
ಟ್ಟೆಡೆಯಿಂ ಸ್ವೇದಜಲಂ ತುಳುಂಕೆ ಜಘನಾಂತರ್ದ್ದೇಶದಿಂದಾವಗಂ ॥
ಬಿಡದುಣ್ಮುತ್ತಿರೆ ಮನ್ಮಥದ್ರವಮನಂಗಾವೇಶದಿಂ ಕಾಲ್ಪಡಂ |
ಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀ[10]ವಿಪ್ರಮಾರ್ತ್ತಂಡನಂ ॥ 803

ಇದು ಅಭಿಲಾಷೆ ॥

ವೃ ॥ ಪಿಂಗೆ ಪೂಸಿದ ಭಸ್ಮಪರಾಗಂ ಪೊಣ್ಮುವ ಘರ್ಮ್ಮಜಲಂಗಳಾ |
ಪಾಂಗು ಗಂಗೆಯ ಶೀಕರಮೆಂಬಂತಾಗಿರೆ ಕಂಡುಮೆ ಶಂಭುವಂ ॥
ಗಂಗೆ ದಲ್ ಬಿಗಿದಪ್ಪಿದಳೆಂ[11]ದಾಶಂಕೆಗೆ ಭೋಂಕನೆ ಮೋದೆ ಮು |
ದ್ದಿಂಗೊಡಲ್ದಮರ್ದಪ್ಪಿದನೀಶಂ ನಲ್ಲಳನಲ್ಲಿ ರತಾಂತದೊಳ್ ॥ 804

ಇದು ಈರ್ಷ್ಯೆ ॥

ವಿಪ್ರಲಂಭಶೃಂಗಾರಕ್ಕೆ ॥

ವೃ ॥ ಪಪವೆತ್ತಿರ್ವ್ವರ ಜೀವಮೊಂದೊಡಲೆ ಬೇ[12]ಱೆಂಬಂತುಟಂ ಮಾಡಿದಂ |
ಮದನಂಗಾವುದು ದೋಷಮುಂ[13]ತೆ ನುಡಿಯಲ್ಕೆಂ ಬಕ್ಕರ್ಮೋ ಪಾಪಮಂ ॥
ಬಿಬಿಬೆಂಬಾಱದಿಗ[14]ಳಸಿಂದಮುಱಿಮಾಯ್ತುರ್ವ್ವಗ್ಗರ್ಮಿನ್ನೊಮ್ಮೆ ದೈ |
ವಬೆತ್ತಾನುಮದಿಂದಬಿಂಬಮುಱಿಯುಂ ಕಾಣ್ಬೊಂದು ಸಯ್ಪುಕ್ಕುಮೋ ॥ 805

ಇದು ಪೂರ್ವ್ವಾನುರಾಗಂ ॥

---

1 ಸಂಕಸದ. 2 ಮಿತ್ತಗೆ, ಮಿತ್ತುರ, ಮಿತ್ತಿದೆ. 3 ಮುಗ್ಧ. 4 ಕಾತರಿಕೆ. 5 ಮನೋಜರಾಜಸುಖಮುಂ, ಮನೋನುರಾಗರಸಮಂ. 6 ಮನಃಪ್ರಿಯತಮರ್. 7 ಪ್ರೀತಿಯಿಂ. 8 ರಾಗೋ 9 ನೀರಂಳ್. 10 ಶ್ರೀ.... 11 ಳೆಂಬಾ. 12 ಬೇಱುವಿಪ್ಪಂತುಟಂ. 13 ಮುಂಚೆ. 14 ಗಳ್ಳ.

ವೃ ॥ ಅಱಿಯಡೆ ಗೆಯ್ದನಬ್ಜವದನೆ ನೀನಿದನೊರ್ವರ್ಗೆ ಸೈರಿಸೆಂದು ಕಾ ।
ಲ್ಗೆಱಗಿರೆಯುಂ ಪ್ರಿಯಂ ಸುಡುಸುಡೇಂ ಗಡ ಸೈರಿಪುದೆಂದು ಕೋಪದಿಂ ॥
ಪಱಪಡೆ ಪೋಗೆ ನೂಂಕಿ ಕಳೆದಂದಿನ ದುಷ್ಕೃತವೆನ್ನನಾವಗಂ ।
ಮಱುಗಿಸಿ ಮುಚ್ಚಿ ಸುಟ್ಟಪುವು ನೋಡಿರೆ ಶೀತಮರೀಚಿಮಾಲೆಗಳ್ ॥ 806

ಇದು ಮಾನಾಖ್ಯಂ ॥

ವೃ ॥ ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ ।
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಿಂಗಳುಮಿಂತೆ ನೀನುಮೆ ॥
ನ್ನನೆ ನಡೆ ನೋಡುತುಂ ನಭದೊಳಿರ್ದಪಮುಪ್ಪದಱಿಂದೆ ನಿನ್ನನಾ ।
ನ[1]ನುವಿಪೆನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ ॥ 807

ಇದು ಪ್ರವಾಸಂ ॥

ವೃ ॥ ವ್ರತಕೆಂ[2]ತಾಯಿತ್ತಾಗಳಿಂತೀತನು ತನು ಲತೆಯಿಾವಾಗಿಯೆಂದೀಪಿದಾಪೀ ।
ಪತನಕ್ಕೆಂತಾ[3]ರ್ತ್ತೆ ಮೆಯ್ಯುಂ ವನಜವದನೆ ಕೇಳ್ ಗ್ರೀಷ್ಮದೊಳ್ ಸಿಚ್ಚವೆತ್ತಂ ॥
ಸತಿ ತ[4]ಟ್ಟುತ್ತಿರ್ಪೆ ಕಾಯ್ಪಿಂದುರಿವ ಬಿಸಿಲೊಳಾಮೋಘವಿಸ್ಫೂರ್ಜ್ಜಿತಾರ್ಣ್ಣಃ ।
ಪ[5]ತಧಾರಾಭೀಕರಾಡಂಬರಜಳಸಮಯಂ ಬಂದೊಡೆಂತಳ್ಕದಿರ್ಪ್ಪೆಯೆ ॥ 808

ಇದು ಕರುಣಾತ್ಮಕವಿಪ್ರಲಂಭಂ ॥

## ಸೂತ್ರಂ ॥ 202 ॥

ವಿಕೃತಾಂಗವೇಷಭಾಷಾ ।
ಹಾಸ್ಯಂ. ಪ್ರಕಾರಕೃತಹಾಸಹೇತುಕಂ ಹಾಸ್ಯಮತಿ ॥
ಕರುಣಂ ಪ್ರಕಟತರಶೋಕಭಾವ ।
ಪ್ರಕೃತಿಪರಂ ಕರುಣಮಾರ್ತ್ತಜನತಾವಿಷಯಂ ॥ 809

ಲಕ್ಷ್ಯಂ ॥
ಹಾಸ್ಯಕ್ಕೆ ॥

ವೃ ॥ ಶ್ರೀ ತ[6]ನ್ನಿಂದಿನ ರೂಪೆ ಕೌಸ್ತುಭದೊಳಚ್ಚೊತ್ತಿರ್ದ್ದಪ್ಪೊಲ್ ತೋಱೆ ಕಂ[7] ।
ಡೇತ[8]ಕ್ಕೀಕೆ ಮದೀಯವಾಸಗೃಹಮಂ ತಾಂ ಪೊಕ್ಕಳಿಂದೇವದಿಂ ॥
ದಾತಾ[9]ವ್ರಾಕ್ಷಿಯನೀಕ್ಷಿಸುತ್ತುಮಿರೆ ತನ್ಮುಗ್ಧತ್ವಮಂ ಕಂಡು ಸಂ ।
ಜಾತಾಂತಸ್ಮಿತನಾದ ಕೃಷ್ಣನೆಮಗೀಗಾನಂದಸಂದೋಹಮಂ ॥ 810

ಇದು ಉತ್ತಮಪಾತ್ರಂ ॥

ವೃ ॥ ಸೊಗಯಿಪ್ಪೊಳ್ದೊಡೆ ನೋಯೆ ನೇ[10]ತ್ರದೆಱೆಪ್ಪೊಲ್ ಸೀಳ್ದಿರ್ದ್ದ ಬಾರಂತೆ ತೋ[11] ।
ಪ್ಪುರ್ಗಿಯುಂ ಪುಣ್ಮಯಮಾಗಿ ಮಾಡಿ ಬಿಟಿ ಮುಂ ಜಂಘಾಪ್ರಮಾಣಕ್ಕೆ ನೂ ॥
ಲ್ದೆಗೆದಂತಿರ್ಪ್ಪ ನಖವ್ರಣಾವಳಿಗಳಂ ನಲ್ಲಂಗೆ ಕಣ್ಗೆತ್ತುತುಂ ।
ನಗುತುಂ ಸಾ[12]ದ್ದ್ರ ಸಮಂಗಮಂ ಕಳೆಯಿಸುತ್ತಿರ್ಪ್ಪಕೆ ಕಣ್ಗೊಪ್ಪಿದಳ್ ॥ 811

ಇದು ಮಧ್ಯಮಪಾತ್ರಂ ॥

---

1 ನನುಮಿಸೆ. 2 ಕೀನಾ. 3 ತಾರ್ತ್ಥ, ತಾಪ್ರ. 4 ಕಟ್ಟುಂತಿರ್ಪೆ. 5 ಪಶೆದಾರಾಭೀರೂಜಳದಸಮಯಂ. 6 ತನ್ನಂದದರೂಪು. 7 ಪೇ! ಬೀ. 8 ಘೊಕ್ಕದ್ರ. 9 ತಾಮ್ರಾಕ್ಷಿನಿರೀಕ್ಷಿಸುತ್ತುಮಿರ. 10 ಸೂತ್ರ. 11 ತೀ. 12 ಕೋಱಿಸವಾಗಮಕ್ಕಳ.

ವೃ ॥ ಪ್ಲವಂಗಮುಕುಳಂಗಳಲ್ಲಿ ಕಿಸುಗಲ್ಲ ಶೃಂಗಂಗಳಂ ।
ದವಾಗ್ನಿಶಿಖೆಗೆತ್ತು ಬೆಚ್ಚಿ ಮದದಂತಿಯುಂ ನಿರ್ಝ್ಝರ ॥
ಪ್ರವಾಹನಗಮೆಂದೆಗೆ[1]ತ್ತದಱ ಪೆಂಗೆ ವಂದಾಗಳಾ ।
ದವಸ್ಥೆ ತ[2]ಱಿಸಲ್ವಿನಂ ನಗಿಕುಮಪ್ಸರೋಬೃಂದಮಂ ॥ 812

ಕಂ ॥ ಕುಳ್ಳಿರ್ದ್ದ ಕು[3]ಳಿರ್ವ ಮಳೆಯೊಳ್ ।
ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕೆಯ್ಯಂ ॥
ಮುಳ್ಳುಚ್ಚೆ ತೆಱೆದು ಪಲ್ಲಂ ।
ಘೊ[4]ಳ್ಳನೆ ನಗಿಸಿದುದು ಕಟಕಮಂ ಮರ್ಕ್ಕಟಕಂ ॥ 813

ಇದು ಜಘನ್ಯಪಾತ್ರಂ ॥

ಕರುಣಕ್ಕೆ ॥

ವೃ ॥ ಬಗೆಗೇಗಳ್ ನಿಚ್ಚಯುಂ ಪುಟ್ಟಿದುದಱುದೆಸೆದಂ ಪನ್ನಗಂ ಕಂಚುಕೂಳ್ಳ ।
ಮಗನಿಂತೀವೃದ್ಧೆಗೀತಂ ತಡೆದಿರದೊಡಗೊಂಡುಯ್ವವಂ ಕಿಂಕರಂ ಪ ॥
ನ್ನಗರಾಜಂಗೀತನಂ ವಾಸುಗಿ ಗರುಡನ ತೀಂಗೊಡ್ಡಿದಂ ತಪ್ಪದಾಹಾ ।
ವಿಗಳದ್ಬಾಷ್ಪಾಂಬುದೀನಾನನೆ ಜನನಿ ಮಗಂ ಪೋಗೆ ಪುಯ್ಯಲ್ಪಿದಪ್ಪಳ್ ॥ 814

ಅಂತಲ್ಲದೆಯುಂ ॥

ವೃ ॥ ಅಱಿಲನೆರ್ದೆಯೊಳ್ ತಿಣ್ಣಂ ತಱಿಕ್ಕೈಸಿ ಪುತ್ರವಿಮೋಹದಿಂ ।
ದೆಱಿವಿ ತನುವಂ ಹಾಹಾ ಹಾವತ್ಸಯೆಂದಮರ್ದಪ್ಪಿಕೊಂ ॥
ಡಱುತುಮಱುತುಂ ನಟ್ಟದ್ಗ್ಗಂಬಂ ಮುನೀಶನಿಳೇಶನಿಂ ।
ಕಿಱಿಸೆ ಸರಲಿಂ ಮುನ್ನಂ ತದ್ವ್ಯರದಿಂದಸು ಪೋಪುದಂ ॥ 815

## ಸೂತ್ರಂ ॥ 203 ॥

ವೀರರಸಂ ಬವರಿಸುಗುಮು ।
ವೀರಂ. ದಾರೋತ್ಸಾಹಪ್ರ[5]ವೃತ್ತಿಕಾರಣಕಾರ್ಯ್ಯಂ ॥
ರೌದ್ರಂ. ದಾರುಣರೋಷಾವೇಶ ವಿ ।
ಕಾರಭವಂ ರೌದ್ರಮೆಂಬ ರಸಮದು ನೆಗಱ್ಗುಂ ॥ 816

ಲಕ್ಷ್ಯಂ ॥

ವೀರಕ್ಕೆ ॥

ವೃ ॥ ತ್ರಿದಶೇಂದ್ರಾರ್ಜ್ಜಿತ ಶೌರ್ಯ್ಯವೂರ್ಮ್ಮೆ ಕಿಱು ಪ್ರೋದ್ಯದ್ಭುಜಾಳಟಿಕ್ಕಾಲದೊ ।
ದ್ವಿದ ಸೈನ್ಯೋದ್ಧತಿ ಮತ್ತಮೊರ್ಮ್ಮೆ ಕಿಱು ಕೇಳ್ ನಿಮಾರ್ಗ್ಗಲವಾಯ್ತುನ್ನುಮೊ ॥
ರ್ಮ್ಮೆ ದಲೆನ್ನೊಳ್ ಸಮಾಸಪ್ಪವಂ ಪೂಣ್ದೆ ಕೀಳ್ಪಂದೊಳ್ಪುಗುಬ ಬೆ[6]ಂಗಿಯೊ ।
ಮುದುವರ್ದ್ದೇ ನಿನಗೆಂತು ಕೇಱೆಪ್ಪೆನೆ ತುಳುಕ್ರಿರಾಕೆಂದ್ರಹಾಸನಿಸುಮಂ ॥ 817

1 ಪತ್ತಿದಱು. 2 ತಱಿಸಲ್ವಿನಂ. 3 ಕಮರಿಯೊಳ್ಕುಳ್ವು । ಪಳ್ಳದ. 4 ಕೊಳ್ಳನೆನಗಿಸ್ಸು. 5 ಪ್ರವೃತ್ತಿ.
6 ಬೆಂಗಿಯುಂ, ಲೆಂಗಿಯುಂ. 7 ನಮಾಳ.

ಅಂತುಮಲ್ಲದೆಯುಂ ॥

ವೃ ॥ ಕ್ಷಿತಿಯೊಳರಾತಿಭೂಪತಿಗಳಂ ತವೆ ಕೊಂದು ಸಮಂತು ವಿಪ್ರಸಂ ।
ತತಿಗಖಿಳಾವನೀತಳಮನಿತ್ತು ನೆಗೞ್ದನಲ್ತೆ ವಿಕ್ರಮೋ ॥
ನ್ನತಿಯೊಡನೊಂದು ದಾನಗುಣದುನ್ನತಿಯಂ ಭುವನಕ್ಕೆ ಭಸ್ಮಸಾ ।
ತ್ಕೃತರಿಪು ಪಾತ್ರಸಾತ್ಕೃತಜಗದ್ವಲಯಂ ಜಮದಗ್ನಿನಂದನಂ ॥. 818

ರೌದ್ರಕ್ಕೆ ॥

ವೃ ॥ ಕುಡಿವೆಂ ದುಶ್ಶಾಸನೋರಸ್ಥಳಮನಗಲೆ ಪೋೞ್ದುರ್ದ್ದ ಕ[1]ನ್ನೆತ್ತರಂ ಪೊ ।
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂಱು ॥
ಗೊಡೆವೆಂ ತದ್ರತ್ನರಶ್ಮಿಪ್ರಕಟಮಕುಟಮಂ ನಂಬು ನಂಬೆನ್ನ ಕಣ್ಣಿಂ ।
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ ॥ 819

ಕಂ ॥ ಅಱಿಪಿದುದು ರೌದ್ರರಸಮಂ ।
ಕಿ[2]ಱುಪಿದ ಕುಡುಪುರ್ವು ಕರ್ಚಿದೌಡುರ್ಚಿದ ಬಾ ॥
ೞಿಱಿಯಲನುಗೆಯ್ದ ಕೆಯ್ಬೆ ।
ಳ್ಕುಱೆ ಪ[3]ಚ್ಚನೆ ಬಿಟ್ಟ ಕಣ್ ಹಯಾರೋಹಕರಾ ॥ 820

## ಸೂತ್ರಂ ॥ 204 ॥

ಭಯಹೇತುಸಮುದ್ಭೂತಂ ।
ಭಯಾನಕಂ. ಭಯಾನಕಂ ಕೃತಜುಗುಪ್ಸನಂ ಬೀಭತ್ಸಂ ॥
ಬೀಭತ್ಸಂ. ನಿಯತಂ ವಿಸ್ಮಯಭಾ[4]ವಾ ।
ಅದ್ಭುತಂ. ಶ್ರಯಮದ್ಭುತರಸಮೆನಿಪ್ಪ[5] ಪೆಸರಂ ಪಡೆಗುಂ ॥ 821

ಲಕ್ಷ್ಯಂ ॥

ಭಯಾನಕಕ್ಕೆ ॥

ವೃ ॥ ಮಕರಂ ಬಾಯ್ದೆಱೆದಂದದಿಂ ತೆ[6]ಱೆದ ಬಾಯ್ ಪೇ[7]ೞ್ದಿರ್ದ ಕೋರ್ದಾಡೆ ನೆ ।
ಕ್ಕ ಕದಂಪೆತ್ತಿದ ಪುರ್ವು ಪತ್ತಿದ ಬಸಿಱ್ ಪೋತಂದ ಕಣ್ ಮೇಘಘೋ ॥
ಷ[8]ಕಠೋರಧ್ವನಿ ನೀಳ್ದ ಕೇಸುಗಿವೊಲಿ[9]ಪ್ಪರ್ಭೀಳಕೇಶಾಳಿ ಸ[10] ।
ಪ್ಪಕನದ್ಭೂಷಣಭೀಷಣಂ ಭಯದಮಾಯ್ತಾರಾಕ್ಷಸೀರೂಪಕಂ ॥ 822

ವೃ ॥ ನೋಮ್ಮಡಿ ನೊ[11]ರ್ದ ಪಿಂದಲೆಯೊಳ್ ಪ[12]ಚ್ಚಳಮಂ ನಿಜಮಾರ್ಗಮಂ ಬಿಸು ।
ಟ್ಟೊಮ್ಮೆಯೆ ಕೞ್ತೆ ಚಮ್ಮಟಿಗೆ ಮುಟ್ಟದವೋಲ್ ನಸುಪೆರ್ಚಿ ತಾನದ ॥
ರ್ಕ್ಕಮ್ಮಡಿ ಪೆರ್ಚೆ ಪೆರ್ಚೆ ನಡುಕಂ ಪೆಱಗೇಱಿದಳೊರ್ವಳೋಪನಂ ।
ಪೆಮ್ಮಲೆ ಪೆನ್ನ ನರ್ಚಿದಪುವೆಂಬಿನಮಪ್ಪಿದಳಾ[13]ಸನೊಪ್ಪಿದಳ್ ॥ 823

1 ಕನ್ನೆತ್ತರಂ. 2 ತಿಱಿಪಿದ. 3 ಬಿಚ್ಚನೆ. 4 ಭಾರಾ. 5 ಪ್ಪುದಕ್ಕಾ ಪೆಸರಿಂ. 6 ತೆಗೆದ. 7 ಪೇೞಿರ್ದ್ದ. 8 ಷಕಘೋರ. 9 ಲಪ್ಪ. 10 ಸ । ಪ್ರಕಟವದ್ವಿಷಣಭೂಷಣಂ. 11 ಜೋಲ್ದ. 12 ಪಕ್ಕಮ. 13 ಳಾಗ ಳಾಪ್ಪಿದಿಂ.

ಕಂ॥ ಬೆರಲಂ ಕಚ್ಚುರ್ವ ಪುತ್ತ್ರಂ ।
ಪರಿದೇಱುವ ಕೆಯ್ದುವಿಕ್ಕಿ ಪೊಱಮಡುವ ಭಯ ॥
ಜ್ವರದಿಂ ನಡುಗುವ ಭೀರುಗ ।
ಳರೆಬರ ಕನ್ನಡಿಸಿದರ್ ಭಯಾನಕರಸಮಂ ॥ 824

ಬೀಭತ್ಸಕ್ಕೆ ॥

ವೃ॥ ನೆತ್ತರಂ ಕುಡಿದು ಸೀನೆಣದೊ[1]ಳ್ಪಿಡಿಖಂಡಮಂ ।
ಪತ್ತ್ರ ತೊ[2]ಯ್ದು ನೆಣದೊಟ್ಟಿದ ಪಾರೆಯುಮಿರಾರೆಯುಂ ॥
ತುತ್ತಿ ನುಂಗಿ ಮಿ[3]ದುಳಂ ತಣಿವಿಂ ಪುಳಿದೇಗುದೇ ।
ಗುತ್ತುಮಿರ್ಪುವ[4]ದಱೊಳ್ ರಜನೀಚರಕೋಟಿಗಳ್ ॥ 825

ಅದ್ಭುತಕ್ಕೆ ॥

ವೃ॥ ಪಯಃಪುಲಿಗಳ್ ಮೊಲೆಯೂಡಿದುವಾಹರಿಣಂಗಳಂ . . . . ।
ನಮುದೊಳ್ ನೋಡಿದುವಾನೆಗಳಂ ಹರಿಗಳ್ ನಿಜೋಜ್ವಲಕೇಸರಾ ॥
ಳಿಯನ್[5]ಗಿದುತ್ತಿರೆಯುಂ ಕುಟಿಲಾಹಿಗಳುಂ ನವಿಲ್ಗಳನೆತ್ತಮಾ ।
ಶ್ರಯಿಸಿದುವಿಂತಿನಿತದ್ಭುತಮಾಯ್ತು ತಪೋಮಹತ್ವದಿನಾಕೆಯಾ ॥ 826

ಕಂ॥ ತನಗಿಲ್ಲದ ಭಯಮಂ ತ್ಯೈ ।
ಲನಾಂತ ರಿಪುನೃಪರ್ಗೆ ಕುಡುವನವರ್ಗಿಲ್ಲದುದಂ ॥
ವಿನುತಜ[6]ಯಶ್ಲಾಘ್ಯಯಶೋ ।
ಧನಮಂ ತಾನೀೞ್ದುಕೊಳ್ವನೇನಚ್ಚರಿಯೋ ॥ 827

ಸೂತ್ರಂ ॥ 205 ॥

ಶಾಂತಂ.

ಸಮಭಾವಪ್ರಭವಂ ಶಾಂ ।
ತಮೆಕ್ಕುಮಂತಾಸಮತ್ವಮುಂ ವರ್ತ್ತಿಸುಗುಂ ॥
ಸಮನಿಸಿ ಸ[7]ಮ್ಯಗ್ಜ್ಞಾನಂ ।
ತಮಮುಮಂ ರಾಗಮುಮನಲೆದು ತೊಲಗಿಸೆ ಮನದಿಂ ॥ 828

ಲಕ್ಷ್ಯಂ॥

ವೃ॥ ಬಗೆಯುಂ ತಾರದೆ ತಾಪಸಾಶ್ರಮಪದಕ್ಕಜ್ಞಾನದಿಂ ಮೂರ್ಖರೇ ।
ಕೆ ಗಡಂ ಮೂಣ್ಬರೊ ಮುಪ್ಪುಱಿಲ್ ಬಡತನಂ ರೋಗಂ ವಿಯೋಗಂಗಳ[8] ॥
ನ್ನೆಗಮಿಕ್ಕಿ ದೂರ್ಗಡಲಂ ಬಿಸುಟ್ಟು ಪೆ[9]ಱದಂ ಕೆಯ್ಕೊಂಡು ಸಂಸಾರದೊಳ್ ।
ಮ[10]ಗುೞ್ದಿಂ ಪುಟ್ಟುವರೆಂಬ ಗಾಂಪಿದೆ ಮಲಂ ಧೀ[11]ರಂಗೆ ಲಜ್ಜಾಕರಂ ॥ 829

1 ದೊಪ್ಪೆರ್ದು. 2 ಕೆಱಮುನ್ನೆಗೆದೊಟ್ಟಿದ, ಕೆಱಯು. 3 ಮಿದುಳಿಂ. 4 ವದೆಱೊಳ್. 5 ನಾಗಿ. 6 ನಯ. 7 ದಿವ್ಯಜ್ಞಾನಂ. 8 ಳುಂನೆಗಮಿಕ್ಕಿದೂರ್ಗಡಲ(ಲಂ). 9 ಪೆಱದಿಂ, ಪೆಱದಿಂ, ಪಸಮಂ. 10 ಶಗುಳ್ದಿಂ. 11 ವೀರಂಗೆ.

ವೃ॥ ಧರೆಯೊಳ್ ಧರ್ಮ್ಮಪಥಕ್ರಮಂಗಳೆಸೆಗುಂ ಮತ್ಕೀರ್ತ್ತನಂಗಳ್ ಜಯೋ।
ದ್ಧುರಮುಂ[1]ಟರ್ತ್ಥಫಲೋಪಮಾನಮೆಮಗೀಹಸ್ತ್ಯಶ್ವತಂತ್ರಂ ಕುಳಾ॥
ಭ[2]ರಣಂ ಕಾಮಫಲೋಪಮಂ ಬಳೆದಪಂ ಮನ್ನಂದನಂ ಸಾಲ್ವುದಿ[3]।
ನ್ನಿರವೇಂ ಮೋಕ್ಷಮಹಾಮಹೀರುಹಫಲೈಕಾ[4]ಸ್ವಾದಮಂ ನೋಡುವೆಂ॥ 830

## ಸೂತ್ರಂ ॥ 206 ॥

ಕರುಣಾರಸಕ್ಕೆ ಮಿಗೆ ಹಾ।
ಸ್ಯರಸಂ ಶೃಂಗಾರರಸಕೆ ಬೀಭತ್ಸಂ ರೌ॥
ದ್ರರ[5]ಸಕ್ಕಮದ್ಭುತಂ ವೀ।
ರರಸಕ್ಕೆ ಭಯಾನಕಂ ನಿ[6]ರೋಧಕಮಕ್ಕುಂ॥ 831

ಲಕ್ಷ್ಯಂ॥

ಕಂ॥ ಕರಜಕ್ಷತಗಳಿತಾ[7]ಸ್ಥಾ।
ನುರಕ್ತಕರ್ದ್ದಮಿತವಿಗ್ರಹಂ ಸು[8]ವ್ರಣಿತಾ॥
ಧರಜಾತಿಪೂತಿಗಂಧಂ।
ತರುಣೀಮುಖಮೆನಗೆ ಪಡೆದುದೊದವಿದಲಂಪಂ॥ 832

## ಸೂತ್ರಂ ॥ 207 ॥

ಎರಡುಂ ವಿರುದ್ಧರಸಮೊಡ।
ವೆರಸಿರೆ ತದವಾಂತರಸ್ಥಮೊಂದನ್ಯರಸಂ॥
ಪರಿಪುಷ್ಟಮಾಗೆಯುಂ ವ್ಯತಿ।
ಕರಣಂ ಮೇಣ್ ತಾಮವಾಗೆಯುಂ ನಿರ್ದ್ದೋಷಂ॥ 833

ಲಕ್ಷ್ಯಂ॥

ವೃ॥ ಅರುಣಜಳಾವಲಿ[9]ಪ್ತಿ ಪೊಸಗುಂಕುಮದಂತಿರೆ ಕರ್ಣ್ಣಲಗ್ನತೋ।
ಮರಮವತಂಸದಂತಿರೆ ನವವ್ರಣರಾಜಿ ವಿಭೂಷಣಾಳಿಯಂ॥
ತಿರೆ ಮಿದುಳಣ್ಮೆ ಪುಷ್ಪಕೃತಶೇಖರದಂತಿರೆ ಕೋಡು ಪೋದರ।
ಜ್ಜರಸೆಯರಣ್ಮೆ ಬಿೞ್ದ ಭಟರಂ ಕೊನೆಮೀಸೆಯ ಚೆನ್ನಪೊಂಗರಂ॥ 834

ಭಯದಿಂ ಕರ್ಚ್ಚಿದು[10]ದೊಂದು ಪುಲ್ ಮುಗಿದ ಕೆಯ್ ಬಿಟ್ಟಿರ್ದ್ದ ಕೇಶಂಗಳಂ।
ನಯನಾಂಭಃಪ್ಲವಮೋಡುವಲ್ಲಿ ಪಿರಿದುಂ ಕಾರುಣ್ಯಮಂ ಮಾಡೆ ವೈ॥
ರಿಯನಾಗಳ್ ನಗುವಂತಿರಿರ್ದ್ದುದು ಕನತ್ಭ್ರೂಭಙ್ಗಂ ವಿನಿರ್ಭಿನ್ನಕುಂ।
ಭಯುಗೋದ್ಯದ್ದ್ವಿಪಮೌಕ್ತಿಕಾಳಿಕಳಿತಂ ಶ್ರೀವಿಪ್ರಮಾರ್ತ್ತಂಡನಾ॥ 835

1 ಮುಂಟಾರ್ತ್ಥ. 2 ಚರ ಂ. 3 ದಿನ್ನಿರವಿಂ, ದಿನ್ನಿರವೆಂ, ದಿನ್ನಿರದೆಂ. 4 ಕಾಸಾರವ ಂ, ಕಾಸ್ತ್ಯದನಂ. 5 ರಸೋತ್ಕಟಗದ್ಭುತಂ. 6 ವಿರೋಧಿಗಳಕ್ಕುಂ. 7 ಹಸ್ತಾ, ಹಸ್ತಾವರಕ್ತ. 8 ಸವ್ರಣಿತಾ. 9 ಲಿಪ್ತನವಕರ್ದ್ದಮ, ಲಿಪ್ತನರ. 10 ದದೊಂದು.

## ಸೂತ್ರಂ || 208 ||

ವೀರಂ ಗೌರಂ ರೌದ್ರಮು |
ದಾರಕ್ತಂ ಪೀತಮದ್ಭುತಂ ಶ್ಯಾ[1]ಮಂ ಶೃಂ ||
ಗಾರಂ ಶ್ವೇತಂ ಹಾಸ್ಯಂ |
ಕಾರುಣ್ಯಂ ಧೂಮ್ರಮಸಿತಮುೞಿದುವವೆರಡುಂ || 836

## ಸೂತ್ರಂ || 209 ||

ಭಾರತಿಯು ಕೊಂಕು ಸತ್ವೋ |
ದಾರತೆ ಸರಸಾರ್ಥಮು[2]ದ್ಧತಸ್ಥಿತಿಯಿನವಱಿಂ ||
ವೃತ್ತಿಭೇದಂಗಳ್. ಭಾರತಿ ಸಾತ್ವತಿ ಕೈಶಿಕಿ |
ಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ || 837

## ಸೂತ್ರಂ || 210 ||

ವಿದ್ವಜ್ಜನಹೃದಯಂಗಮ |
ಸ[3]ದ್ವಕ್ರೋಕ್ತಿಪ್ರಕಾಶಮದ್ಭುತಹಾಸ್ಯೋ ||
ದ್ಯ[4]ದ್ವಸ್ತುವೃತ್ತಿ ಸಲೆ ರಸ |
ಪದ್ವಚನದೊಳೆಸೆಯೆ ಪೇೞ್ಗೆ ಭಾರತಿಯಿಂದಂ || 838

## ಸೂತ್ರಂ || 211 ||

ಬಾಗಂ ಬೀರಂ ಸೊಬಗಂ |
ಬೀಗುಣಮುಂ ಶಾಂತವೃತ್ತಿಯುಂ ಸಾಹಸದು ||
ದ್ಯೋಗಮುಮತಿಲಲಿತಸದಾ |
ಭೋ[5]ಗದೊಳಂಬಾಗೆ ರಂಜಿಕುಂ ಸಾತ್ವತಿಯೊಳ್ || 839

## ಸೂತ್ರಂ || 212 ||

ನಗರಾದಿವರ್ಣ್ಣನಂ ನೃ |
ತ್ಯಗೀತವಾದ್ಯಪ್ರಯೋಗಮಬಳಾವಿಷಯೋ ||
ಪಗಮವ್ಯವಹೃತಿಯೆಂಬಿವು |
ನೆಗೞ್ಗುಂ ಮೃದುಮಧುರರಚನೆಯಿಂ ಕೈಶಿಕಿಯೊಳ್ || 840

---

1 ಶಾಂತಂ, 2 ಮುದ್ರ. 3 ಸದ್ವಕ್ರೋಕ್ತಿ, ಸದ್ವಗೂಢೋಕ್ತಿ. 4 ಸದ್ವಸ್ತು. 5 ಭಾಗ.

## ಸೂತ್ರಂ ॥ 213 ॥

ಕ್ರೂರಾಸ್ತ್ರಪಾತಚಿತ್ರಮು ।
ಹಾರಣಮಾಹೇಂದ್ರಜಾಲರೌದ್ರಾದಿರಸಂ ॥
ಚಾರುತರಸಸ್ಫುಟಬಂಧದೊ ।
ಳಾರಭಟೀವೃತ್ತಿಯಿಂದಭಿವ್ಯಂಜಿಸುಗುಂ ॥ 841

ಇದು ರೀತಿಕ್ರಮರಸನಿರೂಪಣದೊಳ್ ರಸಪ್ರಕರಣಂ ದ್ವಿತೀಯಂ॥

ಗೀತಿಕೆ॥ *ರೀತಿಯುಂ ರಸವಿಭಾಗವುಮಂ ವಿ ।
ಖ್ಯಾತಿಯನಾಂತ ವೃತ್ತಿಗಳಂ ಪ್ರಾ ॥
ತೀತಿಕವಾಗೆ ತಿಳಿಯೆ ಪೇಳ್ದನಿಂತೀ ।
ಭೂತಳದೊಳ್ ಸಲೆ ನಾಗವರ್ಮ್ಮಂ ॥ 842

ವೃ ॥ ಧರೆಯೆಂತಂತೆ ರಸಾಶ್ರಯಂ ಜಲಧಿಯೆಂತಂತಾ[1]ತ್ತಗಾಂಭೀರ್ಯ್ಯಮಂ ।
ಬರಮೆಂತಂತೆ ಸದಾವೃತಂ ದೆಸೆಗಳೆಂತಂತೂರ್ಜ್ಜಿತಂ ಸಂದ ಮಂ ॥
ದರಮೆಂತಂತೆ ಸುವರ್ಣ್ಣಭಾಸಿ ಶ[2]ಶಿಯೆಂತಂತುಜ್ಜ್ವಳೋದ್ವೃತ್ತಕಾ ।
ಸ್ಫುರಿತಂ ಭಾವಿಸೆ ನಾಗವರ್ಮ್ಮರಚಿತೋದಾತ್ತಪ್ರಬಂಧಾನ್ವಯಂ ॥ 843

ಗದ್ಯ ॥ ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯ
ಮಾನಾನೂನಕವಿತಾಗುಣೋದಯಂ ಶ್ರೀ ನಾಗವರ್ಮ್ಮ
ವಿರಚಿತಮಪ್ಪ ಕಾವ್ಯಾವಲೋಕನದೊಳ್
ರೀತಿಕ್ರಮರಸನಿರೂಪಣಮೆಂಬುದು
ಚತುರ್ತ್ಥಾಧಿಕರಣಂ.

---

* ಈ ಪದ್ಯವು ಮೂರು ಪ್ರತಿಗಳಲ್ಲಿ ಈ ರೀತಿಯಾಗಿಯೇ ದೊರೆಯುತ್ತದೆ. ಒಂದು ಪ್ರತಿಯಲ್ಲಿ ಪಾಠ ಕೆಳಗೆ ಬರೆದಿರುವಂತೆ ಕಂದರೂಪವಾಗಿ ದೊರೆಯುತ್ತದೆ :—

ರೀತಿರಸಭಾಗಮುಮಂ ವಿ । ಖ್ಯಾತಿಯನಾಂತಮಳವೃತ್ತಿವೃತ್ತಂಗಳುಮಂ ॥
ಪ್ರೀತಿಕವಾಗಿರೆ ಪೇಳ್ದಂ । ಭೂತಳದೊಳಗೆಸೆಯೆ ನಾಗವರ್ಮ್ಮಕವೀಂದ್ರಂ ॥

1 ತ್ವಾಷ್ಟ್ಯ. 2 ರವಿ,

# 5. ಕವಿಸಮಯಾಧಿಕರಣಂ.

ಸೂತ್ರಂ || 214 ||

ಆವುದಶೇಷಲೋಕವಿಷಯಸ್ಥಿತಿಯುಳ್ತ ವಿಭಾಗಮಾರ್ತ್ಥಮುಂ |
ಭಾವಿಪೊಡಲ್ತು ಸತ್ಕವಿಪರಂಪರೆಯಿಂ ಪರಿಗೀ[1]ತಮಾಗಿ ನಿ ||
ಷ್ಕೇವಳಮಾ[2]ದ ರೂಢಿವಶದಿಂ ಸಲೆ ಸಲ್ವುದಿ[3]ದಲ್ತೆ ಶಿಷ್ಟಸಂ |
ಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ|| 844

ಸೂತ್ರಂ || 215 ||

ಆತತಸತ್ಕವಿಸಮಯಂ |
ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾ ||
ಖ್ಯಾತಿ ಸದಕೀರ್ತ್ತನಂ ನಿ |
ರ್ಣೀತಂ ನಿಯಮಾರ್ತ್ಥಮೈಕ್ಯಮೆನೆ ನಾಲ್ಕು ತೆಱಂ || 845

---

ಅಸದಾಖ್ಯಾತಿಪ್ರಕರಣಂ.

ಸೂತ್ರಂ || 216 ||

ಸಲಿಲಾಶ್ರಯಮಾತ್ರದೊಳಂ |
ಕಲಹಂಸಪ್ರಭೃತಿ ನದಿಗಳೊಳ್ ಕಮಲಸಿತೋ ||
ತ್ಪಲಕುವಲಯಾದಿ ಶೈಲಾ |
ವಲಿಯೊಳ್ ರ[4]ತ್ನಾದಿಯುಂ ಪ್ರಯೋಗಿಸುವ[5]ಡೆಗುಂ || 846

ಲಕ್ಷ್ಯಂ ||

ಜಲಾಶ್ರಯಮಾತ್ರದೊಳ್ ಹಂಸಾದಿಗಳ್ಗೆ ||

ವೃ || ಜಕ್ಕವ[6]ಕ್ಕಿಗಳಿಂ ಕಳಹಂಸೆಯಿಂ |
ಮಿ[7]ಕ್ಕ ಸಾರಸದಿಂ ಕುರರಂಗಳಿಂ ||
ಮೊಕ್ಕಳಂ ಸೊಗಯಿಪ್ಪುದು ನೋಡ ನೋ |
ಟಕ್ಕೆ ಚೆಲ್ವೆಸೆದಿಲ್ಲಿಯ ಪೂಗೊಳಂ || 847

1 ನೀತ. 2 ಮಾಗಿ. 3 ದದಲ್ತೆ. 4 ರತ್ನಾಳಿಯುಂ, ರತ್ನಾದಿಕಂ. 5 ಪದುಗುಂ. 6 ಕುಕ್ಕುಟಗಳಿಂದೆವಸಾರ ಸಂಗಳಿಂ. 7 ನಾತೆ.

ನದಿಯೊಳ್ ಕಮಲಾದಿಗಳ್ಗೆ ॥

ವೃ ॥ ಸರಯೂನದ್ಯರವಿಂದಮಂದಮಕರಂದಸ್ಯಂದಿ ಗಂಗಾಂಬುಶೀ ।
ಕರಸಂಸಂಗಿ ಲತಾಭಿರಾಮಲಲನಾಲಾ[1]ಸ್ಯೈಕಶೈಲೂಷನ ॥
ದ್ರುರುಹಕ್ರೋಡನಿಪಾತಿ ಮಾ[2]ಲ್ಯಮದನುಪ್ರಸ್ಥೋತ್ಥಿತಂ ಯಾಮುನೋ ।
ದರಕುಂಜಸ್ಥಿತಿ ಮೆಲ್ಲನಲ್ಲಿ ಸುೞಿಗುಂ ಬಂದೊಂದು ಮಂದಾನಿಳಂ ॥ 848

ಕಂ ॥ ಕುವಲಯವನರುಚಿಯಿಂ ಜಾ ।
ಹ್ನವಿಯ ಜಳಂ ಕರಮೆ ಕಱ್ಗೆ ತೋಱಿದುದಂತಾ ॥
ಪ್ಲವಗಧ್ವಜಂಗೆ ಯಮುನಾ ।
ಪ್ರವಾಹಸಂಭೇದಮಾದ ತೆಱದಿಂದಾಗಳ್ ॥ 849

ಶೈಲದೊಳ್ ರತ್ನಾದಿಗಳ್ಗೆ ॥

ವೃ ॥ ಕಳಧೌತೋಚ್ಚಶಿಲೋದ್ಗತಾಂಶುವಿಲಸತ್ಪಾದಂ ಸ್ಫುಟಸ್ಫಾಟಿಕೋ ।
ಪಳಧಾ[3]ಮೋಜ್ವಳಮಧ್ಯಮಂಬುರುಹರಾಗೋದಗ್ರಪಾಷಾಣಭಾ ॥
ವಳಯೋದ್ಭಾಸಿನಿಜೋಪಕಂಠಮು[4]ಸಿತಚ್ಛಾಯಾಂತರತ್ನಪ್ರಭಾ ।
ವಿಳಮೂರ್ಧ್ವಂ ನಡೆ ನೋಡೆ ಪೋಲ್ತುದು ನಗಾಧೀಶಂ ಖಗಾಧೀಶನಂ ॥ 850

ಕಂ ॥ ಮರಕತದ ಕಲ್ಲ ಕ[5]ವಿಗಳೊ ।
ೞ[6]ರಡಱಿಯದೆ ಕೂರ್ತ್ತು ಧೂರ್ತ್ತಸುರಮಿಥುನಂಗಳ್ ॥
ನೆರೆದಳಸುಗಲಿಸೆ ಗಿಳಿಯುಂ ।
ಪುರುಳಿಯುಮಳಸುವುವು ದೇವಭಾಷೆಗಳಳಸಂ ॥ 851

ಅಂತಲ್ಲದೆಯುಂ ಧನದನ ।
ಗಂ ತನಗಟ್ಟಿದೊಡೆ ರಾಯಭಾರಿತನಂ ಬಂ ॥
ದಂತಿಪ್ಪುರ್ವಿದಱಿ ಕುಂಜೋ ।
ಪಾಂತದ ತ[7]ಱಿತಱಿಸಿ ಪೊಳೆವ ಕು[8]ಳಿಶಾಶ್ಮಂಗಳ್ ॥ 852

ಇದು ಜಾತಿ ॥

## ಸೂತ್ರಂ ॥ 217 ॥

ತಮದೊಡ್ಡು ಮುಷ್ಟಿಸಂಗ್ರಾ ।
ಹ್ಯಮಭೇದ್ಯಂ ಸೂಜಿಗಪ್ಪೊಡಂ ತಾನೆನೆಯುಂ ॥
ಕುಮುದಪ್ರಿಯಾತಪಂ ನಾ ।
ಹ್ಯಮುಂ ಜಳಗ್ರಾಹ್ಯಮೆನೆಯುಮಿಷ್ಟಮಿಮಕ್ಕುಂ ॥ 853

1 ಲಾಸೆಲ್ಪೀಷ, ಳಸ್ಯೈಕಶ. 2 ಪಾಳವವಧೂ. 3 ದಲ್ಪೋಜ್ವಳ. 4 ಮುಹಿತ. 5 ಕಣಿ. 6 ಳೆರಡಿಲ್ಲದೆ ಕೂಡಿ ಕೂತ್ತುರ್. 7 ತಳದಳಸಿ. 8 ಕುಳಿಶಾಸ್ತ್ರಂಗಳ್.

ಲಕ್ಷ್ಯಂ ||

ತಮಕ್ಕೆ ||

ವೃ || ಪೊದೆದ ಮದವನ್ಮಾತಂಗೇಂದ್ರಾಜಿನಾಂಬರಮಂ ನಿಮಿ |
ರ್ಚ್ಚಿದಪನಭವಂ ತಾನೆಂಬಂತಾಗೆ ಪೆರ್ಚ್ಚಿದಗುರ್ವಿನೊಳ್ ||
ಪುದಿದೊದವಿನಿಂ ಸೂಚೀನಿರ್ಭೇದ್ಯಮಪ್ಪಿನಮೆಯ್ದೆ ಪ |
ರ್ವಿದುದಸದಳಂ ಮುಷ್ಟಿಗ್ರಾಹ್ಯಂ ತಮಂ ಭುವನಾಂತಮಂ || 854

ಚಂದ್ರಾತಪಕ್ಕೆ ||

ವೃ || ಬೆ[1]ಳಗಸೆದೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದ್ದಿ ಬ |
ರ್ಚ್ಚಲನೆ[2]ೞದೋಂಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್ ||
ನೆಲೆಯಿನಿಸೆಂದು ನೋಡಲೊಳಪೊಕ್ಕು ದುಡುಂಮಿಱಿದಾಡಲೀಸಲ |
ಲ್ಗಲಿಸಿದಲಂಪಿನಿಂ ಬ[3]ಗೆದುದಂದು ಜನಂ ಘನಚಂದ್ರಿಕಾಂಬುವಂ|| 855

ಇದು ದ್ರವ್ಯಂ ||

ಸೂತ್ರಂ || 218 ||

ಇರುಳೊಳ್ ಚಕ್ರಾಹ್ವ[4]ಯಯುಗ |
ವಿರಹಾರ್ತ್ತಿ ಚಕೋರಚಂದ್ರಿಕಾಪಾನಮಿವಿಂ ||
ತೆರಡುಂ ಕ್ರಿಯಾತ್ಮಕಂಗಳ್ |
ವಿರಚಿಸೆಪ[5]ಡೆಗುಂ ಪ್ರಯೋಗಗತಿಲಕ್ಷ್ಯಂಗಳ್ || 856

ಲಕ್ಷ್ಯಂ ||

ಪ್ರಥಮಕ್ಕೆ ||

ವೃ || ನೆರೆವನ್ನಂ ರವಿ ಸಿಲ್ಲದ[6]ಸ್ತಗಿರಿಯುಂ ಸಾಧ್ವರ್ಂ ಪ್ರಿಯುಂ ಪೋಗಲಾ |
ತುರನಾಗಿರ್ದ್ದನೆನುತ್ತು ಮತ್ತಿನನಸಿ[7]ತ್ತಾತ್ಮೀಯನಂ ನೋಡಿ ಕೋ ||
ಪರಸಾವೇ[8]ಶಮನೊಂದು ಶೋಕರಸಮಂ ಮಾತ್ತೊಂದು ಕಗ ಕೆಯ್ಕೊಳು |
ತ್ತಿರೆ ಕೆ[9]ಯ್ಕೊಂಡುದು ಚಕ್ರವಾಕವಧು ಕಣ್ಗೆತ್ತಂ ನದೀಲೀಲೆಯಂ[10] || 857

ಬಿಸರುಹಸಖನಸ್ತಾದ್ರೀಂದ್ರಮಂ ಪೊರ್ದ್ದೆ ಪೋದಮೆ |
ಬಿಸುಟನಿಯುನೆ ನೀನುಂ ನಿನ್ನ ಬೆಂಬನ್ನೊಳನ್ನೀ ||
ಯುಸುವುಮಿರದೆ ಪೋಗಲ್ಕಿರ್ದ್ದದೆಂದಿಂತೊನಲ್ಗಂ |
ಕುಸುಮಶರಶಲಾಕಾಕೀಲಿತಾಂಗಂ ರಥಾಂಗಂ || 858

1 ಜಲಗಸೆ ತೀವಿ, ಬೆಲಸಗೆ. 2 ನೆಳ, ನೆಲ. 3 ನಳಸಿದ ಘನಚಂದ್ರಿಕೆಯುಂ ಲತಾಂಗಿಯರ್. 4 ಹ್ವಯ್ಯಮ. ಪತುಗುಂ. 6 ನಸ್ತ. 7 ತಿಂತಾ. 8 ಪೇಗನುಬೆಂದು. 9 ಕೆಯ್ಕೊಂಡುದು ಚಕ್ರವಾಕವಧು. 10 ಯುಂ.

ಕಂ॥ ಸರಸಿಜಷಂಡದ ತೆರೆಗಳ್ ।
ತೆರಳ್ವಿನಂ ಕಮಳಪತ್ರಚಯಮೆನಿತನಿತುಂ ॥
ಕೊರಗುವಿನಂ ಬಿಸುಸುಯ್ದೀಂ ।
ಬಿರಯಿಸಿದುನ್ರೊ ಚಕ್ರವಾಕಮಿಥುನಮಮಿರುಳೊಳ್ ॥ 859

ದ್ವಿತೀಯಾಕ್ಷೆ ॥

ವೃ ॥ ಮನಮನೊ[1]ನಲ್ವವಂ ಕಿರಣಜಾಲದಿನಂತವು ಪ್ರೋಗೆ ಮುಂ[2]ದಗೆ ।
ಟ್ವನಿತಜಿಯೊಳಟ್ಟಿಡಂಗಿದ[3]ಪನಂತದಜಿಂದೆರೆದಪ್ಪೆನೇಣಲಾಂ ॥
ಛನನ ಕರಂಗಳುಳ್ಳನಿತುಮಂ ತವೆ ಪೀರೆನುತುಂ ಚಕೋರಲೋ ।
ಚನೆ ಪಿರಿದ[4]ಪ್ಪ ನಲ್ಮೆವೆರಸಳ್ಕಜಿಯೊಳಂದೆರೆದಳ್ ಚಕೋರಮಂ ॥ 860

ಇದು ಕ್ರಿಯೆ ॥

ಸೂತ್ರಂ ॥ 219 ॥

ಹಸಿತಯಶಃಪ್ರ[5]ಭೃತಿಯೊಳು ।
ಲ್ಲಸಿತಂ ಸಿತಭಾವಮಯಶದೊಳ್ ಪಾಪದೊಳಂ[6] ॥
ತಸಿತರುಚಿ ಕೋಪರಾಗ ।
ಪ್ರಸರದೊಳಾರಕ್ತವರ್ಣ್ಣಮ[7]ಭಿವರ್ಣ್ಣಸುಗುಂ ॥ 861

ಲಕ್ಷ್ಯಂ ॥

ಹಸಿತಯಶಃಪ್ರಭೃತಿಗೆ ॥

ಕಂ ॥ ಬೆಳಪ ಮುಖಚಂದ್ರನೊಳ್ ತಳ ।
ತಳಿಸುತ್ತುಂ ತೊಳಗಿ ಪೊ[8]ಳೆವ ಪಲ್ದಿಂಗ[9]ಳದೊಂ ॥
ದಳವನಳವಡಿಸಿ ಕರಮು ।
ಜ್ಜಳಿಪ ಮುಗುಳ್ನಗೆ ಬೆಡಂಗು ನೃಪನಂದನೆಯಾ ॥ 862

ವೃ ॥ ಹರಹಾಸದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀ ।
ಕರಮಂ ನಿಂದಿಸಿ ಸಿಂಧುವಾರಕುಸುಮಶ್ರೀಯಂ ಪ[10]ಳಂಚಾಡಿ ಭೂ ॥
ಸುರಚಂದ್ರಾಂಶುವಿ[11]ಕಾಸಮಂ ತೆಗಳ್ದು ಮುಕ್ತಾಹಾರವಿಸ್ತಾರಮಂ ।
ಬರಮಂ ಮಿಕ್ಕು ಪೊಳಪ್ಪುದುಜ್ವಳಯಶಂ ಶ್ರೀಗಂಡಮಾರ್ತ್ತಂಡನಾ ॥ 863

ಕಂ ॥ ನಂದನನೊಸಗೆಯುಮಾಮ[12]ಕ ।
ರಂದಕನೆಳಸಿರದೆ ಬಿ[13]ಟ್ಟು ಪೋದೊಂದಟಿಲುಂ ॥
ಕುಂದದೊಡನ[14]ಲೆಯೆ ಸತಿ ಕಾ ।
ಳಿಂದಿಯು ಸುರನದಿಯು ಕೂಡಲಂ ಪೋಲ್ತಿರ್ದ್ದಳ್ ॥ 864

1 ನೊಜಿಲ್ಲವಂ. 2 ಮುಟ್ಟ. 3 ಪವನಂತ, ಪನುಮಂಗ. 4 ದೊರದುಪನ್ಲ. 5 ಪ್ರಸರ. 6 ಳ । ಪ್ಪುಚ.
7 ಮದುವರ್ಣ್ಣಯಂ, ಮದುವರ್ಣ್ಣಯುತಂ, ಮದುವರ್ಣ್ಣತಂ. 8 ಬೆಳಪ. 9 ಗಳಗೊಂ. 10 ಪಳಂಚಲವಿಭಾ.
11 ವಿಳಾಸ. 12 ಮರ ! ಕಂದಕ. 13 ಬಿಸುಟುಪೋದೊಡೆಯಟಿಲುಂ. 14 ವಳಯೆ.

ಅಯುಕ್ತಪದಂಗಳ್ಗೆ ॥

ಕಂ ॥ ವಿಳಸದಮೃತಾಂಶುಮಂಡಲ ।
ದೊ[1]ಳ್ ಕಱೆಯಂತಂತೆ ನೆಗೞೆ ದುರ್ಯ್ಯಶದಿಂದಂ ॥
ಖಳನಾನೃಪಾತ್ಮಜಂ ನಿ ।
ರ್ಮ್ಮಳನಿಜವಂಶಕ್ಕೆ ಮಾಡಿದಂ ಮಳಿನತೆಯಂ ॥ 865

ದೊರೆಕೊಂ[2]ಡ ಪಾಪಲೇಶ್ಯಾ ।
ಪೋಣಾಮುಮೆ ಕೃ[3]ಷ್ಣವರ್ಣ್ಣಮಂ ಪುಟ್ಟಿಸಿದಂ ॥
ತಿರೆ ಕಡುಗಲಿಮುರವಂದಿರ ।
ಪ[4]ರುಷಸ್ವರಪ[4]ರುಷನಯನಪ[5]ರುಷಶರೀರರ ॥ 866

ಕೋಪರಾಗಂಗಳ್ಗೆ ॥

ಕಂ ॥ ಅವತಂಸಾಶೋಕನ[6]ವ ।
ಪ್ರವಾಲರುಚಿ ಮುಳಿಸೆ ರೂಪುಗೊಂಡವೊ[7]ಲೆರಡುಂ ॥
ಕಿವಿಗಳೊಳವಾ[8]ಯುಮಂ ಪ ।
ರ್ವ್ವವ ಕ[9]ಲ್ಪಿಯು ತೆಱದಿನೆಸೆದುದಾಸ್ಥಾಯಿಕೆಯೊಳ್ ॥ 867

ಕುಂಕುಮಮದ ಕ[10]ದಡುನೀರಂ ।
ಭೋಂಕೆನೆ ಮೇಲೊತ್ತೆ ನೃ[11]ಪತಿ ಮೆಯ್ಯಿಂ ರಾಗಂ ॥
ತಾಂ ಕರಮೆ ತೀವಿ ಪೊಱಗೆ ತು ।
ಳುಂಕುವವೋಲ್ ತೋಱೆ ನೀಱೆ ಕಣ್ಗೆಸೆದಿರ್ದ್ದಳ್ ॥ 868
ಇದು ಗುಣಂ ॥

ಇದು ಕವಿಸಮಯದೊಳ್ ಅಸದಾಖ್ಯಾತಿಪ್ರಕರಣಂ ಪ್ರಥಮಂ ॥

---

## ಸದಕೀರ್ತ್ತನಪ್ರಕರಣಂ.

### ಸೂತ್ರಂ ॥ 220 ॥

ಅಸುಕೆಯ ಕುಜದೊಳ್ ಫಳಮಂ ।
ವಸಂತದೊಳ್ ಜಾತಿಕುಸುಮಮಂ ಚಂದನದೊಳ್ ॥
ಕುಸುಮಫಲಮೆಂಬಿವಂ ಬ[12] ।
ಣ್ಣಿಸದಿರ್ಪ್ಪುದು ತಾಮವಲ್ಲಿ ಸಂಭವಿಸುವೊಡಂ ॥ 869

1 ದೊಳಗಣಕಜ್ಜಿತ ಪೊಲತೆ. 2 ಕೊಂಡು ಪಾದಲೇಶ್ಯಾ. 3 ಪಾದರೂಪವಂ. 4 ಪುರುಷ. 5 ಪಕ್ಷ, ಪುರುಷ. 6 ವನಂ. 7 ಎನ್ದುಂ. 8 ಪೊಂಪಮಂ, 9 ಕಲ್ಪಿಪ. 10 ಕಮಳ. 11 ನೃಪನ. 12 ಪ.

ಲಕ್ಷ್ಯಂ ||

ಕಂ || ಕುಸುಮಂಕಿಸಲಯಮೆ ಲೋಕ |
ಕ್ಕೆ ಸೆವುತ್ತಂಸಾವತಂಸಮೆನೆ ಸಾಲದೆ ಸಂ ||
ದಸುಕೆಗೆ ನಿಸ್ಸಾರಫಲ |
ಪ್ರಸೂತಿ ಮತ್ತಂತದಾದೊಡೇನಾಗದೊಡೇಂ || 870

ಎನಿತು ಸುಮನಸ್ಸಮುನ್ನತಿ |
ತನಗಾದೊಡಮಭಿವಿನೂತಜಾತಿವಿಕಾಸ ||
ಕ್ಕೆನಿತೆಡೆಗುಡದುದಱಿಂ ಕುಲ |
ಜನದ ವಿಭೂತಿಯನೆ ಸುರಭಿಸಮಯಂ ಪೋಲ್ಕುಂ || 871

ಬಿದಿವಸದೆ ಕುಸುಮಫಲಮಿ |
ಲ್ಲದಿರ್ದೊಡಂ ತನ್ನದೊಂದು ಮೆಯ್ಯಿಂದಂ ಲೋ ||
ಕ[1]ದ ಸೇದೆಯೆಲ್ಲಮಂ ಕಿಡಿ |
ಸಿದವುದು ಚಂದನಮೆ ವಂದ್ಯಜನ್ಮಂ ಕುಜದೊಳ್ || 872
ಇದು ಜಾತಿ ||

## ಸೂತ್ರಂ || 221 ||

ಸಿತಪಕ್ಷದೊಳುಳ್ಳುಡಮಂ |
ಧತಮಸಮಂ ಕೃಷ್ಣಪಕ್ಷದೊಳ್ ಚಂದ್ರಿಕೆಯಂ ||
ಕೃತಮತಿಗಳ್ ಕವಿಮಾರ್ಗ್ಗ |
ಶ್ರಿತಗತಿಗಳ್ ಪೇೞದಿರ್ಕ್ಕದೆಂ[2]ತುಂ ಕೃತಿಯೊಳ್ || 873

ಲಕ್ಷ್ಯಂ ||

ಕಂ || ಇಡಿದಿರೆ ಗುಹಾಂಧಕಾರಂ |
ಪೊಡರ್ಪಸೆದಿರೆ ಚಂದ್ರಕಾಂತರುಚಿ ನಗದೋೞರೊಂ ||
ದೆಡೆಗಳ್ ಪೋಲ್ತಪ್ಪವದೊಂ |
ದೆಡೆಯೊಳ್ ನೆಲಸಿರ್ದ್ದ ಕಾಳಮಂ ಜೊನ್ನಮುಮಂ || 874
ಇದು ದ್ರವ್ಯಂ ||

## ಸೂತ್ರಂ || 222 ||

ದಿವಸದೊಳಸಿತಾಬ್ಜವಿಕಾ |
ಸಮುಮಂ ಶೇಫಾಳಿಕಾಶ್ರುಬಿಂದುಪರಿಭ್ರಂ ||
ಶಮುಮಂ ಪೇೞಲ್ಕಾಗದು |
ಸಮವಾಯಂ ಸಮನಿಸಿಪ್ಪೊಡಂ ಸತ್ಕೃತಿಯೊಳ್ || 875

1 ಕದೊಳಗಾದ ಪ್ರತಿಯು. 2 ದೆಂದುಂ.

ಲಕ್ಷ್ಯಂ॥

ವೃ॥ ಪಗಲ್ ರತಾರಂಭದೊಳಿರ್ದ್ದಿರುಳ್ ಕನ ।
ಲ್ವಗಲ್ವ ಚಕ್ರಾಹ್ವಯುಗಂಗಳಚ್ಚುಱಿಂ ॥
ಮೊಗಕ್ಕೆ ತರ್ಪ್ಪಂತ[ಲ]ರಲ್ ತಗುಳ್ದ್ದವೆ ।
ಲ್ಲಿಗಂ ರಜಂ ಪೊಣ್ಮೆ ಮಹೋತ್ಪಳಾದಿಗಳ್ ॥ 876

ಕಂ॥ ಸಸಿಯೊಚ್ಚರಮಂ ಕಂ[1]ಡೊಂ ।
ದೊಸಗೆ ಮನಕ್ಕಧಿಕವಾಗೆ ಕೇಳಿಕೆ ಸಂ ॥
ತಸದಿಂದಿಕ್ಕಿದ ಬಾಷ್ಪ ।
ಪ್ರಸರಮನೀಱಿಸಿದುವು ನಿ[2]ಶಯೊಳಲರ್ಕ್ಕಲರ್ಗಳ್* ॥ 877

ಇದು ಕ್ರಿಯೆ ॥

ಸೂತ್ರಂ ॥ 223 ॥

ತತದಶನದ್ಯುತಿಯೊಳರ ।
ಕ್ತತೆಯನೆ ವಿಕಸತ್ಪ್ರಿಯಂಗುಸು[3]ಮನಸದೊಳಪೀ ॥
ತತೆಯನೆ ಪಂಕಜಮುಕುಳ ।
ಪ್ರತತಿಯೊಳ್[4]ಹರಿತ್ತ್ವವೃತ್ತಿಯನೆ ಪೇಱ್ಗೆ ಬುಧರ್ ॥ 878

ಲಕ್ಷ್ಯಂ ॥

ದಶನಾರಕ್ತತೆಗೆ ॥

ವೃ ॥ ತೊಳಪ ದಂತಮರೀಚಿಸಂತತಿ ಪರ್ವ್ವೆ ಬಳ್ವಳನೀಳ್ದ್ದಗೊಂ ।
ದಳಿಸಿ ಬಾಳಮೃಗಾಂಕದೀಧಿತಿಜಾಳಮಂಜರಿಗಳ್ ಜಗ ॥
ದ್ವಳಯಮಂ ಬೆಳಪಂತೆ ಬಂದು ಸಭಾಂತರಾಳಮನೆಲ್ಲಮಂ ।
ಬೆಳಗೆ ಭೂವಳಯಾಧಿಪಂ ನುಡಿಗುಂ ಸ್ವಚಿತ್ತಗತಾರ್ತ್ಥಮಂ ॥ 879

ಕಂ॥ ಕುಂದದಳಧವಳನೃಪದಶ ।
ನೇಂದುಜ್ಯೋತ್ಸ್ನಾಮೃತಾಚ್ಛಜಲಪರಿಷೇಕಂ ॥
ಮಾಂದಿಸುವಂತಾದುದು ನೃಪ ।
ನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ ॥ 880

---

1 ಕಂಡೊಗೆ. 2 ನಿಶಿ. * ಈ ಪದ್ಯವಾದಮೇಲೆ ಒಂದು ಪ್ರತಿಯಲ್ಲಿಮಾತ್ರ ಕೆಳಗೆಬರೆದಿರುವ ಪದ್ಯವು ಸೇರಿಯುತ್ತದೆ;—

ಆನೆ ಬದಿರ್ ಸಂದಿ ಮುಗಿಲ್ । ಮೀನಂಬುಧಿ ಪಾವು ಶಂಖಮೊಂಬೇರೆಯೊಂಟುಂ ॥
ಪಾನಂಗಳಲ್ಲಿ ಪುಟ್ಟುಗು । ಮೇನಚ್ಚರಿ ಕೇಳದು ನೋಡ ಮಾತ್ರಕರತ್ನಂ ॥

ಇದು ಪದಾರ್ತ್ಥನ ಪ್ರಕರಣಕ್ಕೆ ಸಂಬಂಧಿಸುವುದಿಲ್ಲವಾದುದರಿಂದ ಇಲ್ಲಿ ಬರೆದಿದೆ. 3 ಕುಸುಮದೊಳತಿಪೀ. 4 ಲಿಹಾ ಯುವೃತ್ತಿ ಪೇಳ್ಗೆಬುಧರ್ಕ್ಕಳ್, ಲಿಹಿಂತ.

ಪ್ರಿಯಂಗುಕುಸುಮಾಪೀತತ್ವಕ್ಕೆ ॥

ಕಂ ॥ ಇವಳೀಪ್ರಿಯಂಗುಕುಸುಮ ।
ಚ್ಛವಿಲಸಿತಶ್ಯಾಮಕುಚತಟಾಂತದೊಳೊಪ್ಪಿ ॥
ರ್ಪ್ಪವು ತಾರಹಾರರುಚಿ ನೀ ।
ಳವೇದಿಕಾಂತರದೊಳೆಸೆವ ಪೂವಲಿಗಳವೋಲ್ ॥ 881

ಪದ್ಮಕುಟ್ಮಳಾಹರಿತತ್ವಕ್ಕೆ ॥

ವೃ ॥ ತೆರೆಯ ಪೊಯ್ಲೊಳೆ ತೆರಳ್ದು ಬರ್ಪ್ಪವಿ ।
ಸ್ಫುರಿತಶಂಖನಿವಹಂ ಪಯೋಧಿಯೊಳ್ ॥
ಕರಮೆ ಚೆಲ್ವೆಸೆದು ಕಣ್ಗೆ ತೋರ್ಕ್ಕುವಂ ।
ಬುರುಹಕುಟ್ಮಳಕುಳಂಗಳಂತೆವೋಲ್ ॥ 882
ಇದು ಗುಣಂ ॥

ಇದು ಕವಿಸಮಯದೊಳ್ ಸದಕೀರ್ತ್ತನಪ್ರಕರಣಂ ದ್ವಿತೀಯಂ ॥

---

## ನಿಯಮಾರ್ಥಪ್ರಕರಣಂ.

### ಸೂತ್ರಂ ॥ 224 ॥

ಜಳಧಿಯೊಳೆ ತಿಮಿತಿಮಿಂಗಿಳ ।
ಗಿಳಮಕರಪ್ರಕರಶಂಖಸಂಭವಮುಕ್ಕುಂ ॥
ಮಳಯಹಿತತಾಮ್ರಪರ್ಣ್ಣಿಗೆ ।
ಜಳದೊಳೆ ಶುಕ್ತಿಜಮಣಿಪ್ರಕಾಂಡಪ್ರಭವಂ ॥ 883

ಲಕ್ಷ್ಯಂ ॥

ತಿಮಿತಿಮಿಂಗಿಳಾದಿಗಳ್ಗೆ ॥

ವೃ ॥ ಮಿರ್ವರುಣಧ್ವಜಂಗಳ ನೆೞಲ್ಗಳನೊಂದೆರೆಗೆತ್ತು ವಾರ್ಧಿಯೊಳ್ ।
ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ ॥
ಗಳೆ ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂ ।
ಗಿಳಮುಮನಾತಿಮಿಂಗಿಳಗಿಳಂ ತವೆ ನುಂಗಿದುದೊಂದು ತಾಣದೊಳ್ ॥ 884

ಕರಿಮಕರಂಗಳುಚ್ಚಳಿತಭಂಗುರತುಂಗತರಂಗಮಾಲೆಯುಂ ।
ಕರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀ ॥
ಕರದೊಳೆ ನಾಂದು ಸೇಡುಗೊಳುತುಂ ಸುೞಿದೂದುವ ಗಾಳಿ ಬರ್ಪ್ಪ ದೇ
ವರ ವರಕಾಂತೆಯರ್ಕ್ಕಳ ಪರಿಶ್ರಮಮಂ ಕಳೆದತ್ತು ವಾರ್ಧಿಯೊಳ್ ॥ 885

ವೃ ॥ ನೊರೆಯಿವಲ್ಲವು ತಳ್ತ ಶಂಖದ ಬಳ್ಳಿಗಳ್ ಬಡಬಾನಲಂ ।
ಕುರವಿವಲ್ಲವು ರತ್ನದೀಧಿತಿಗಳ್ ತರಂಗಮಿವಲ್ಲವು ॥
ದ್ಧಿರಕುಳಾಚಳಪಙ್ಕ್ತಿಗಳ್ ಜಳಶೀಕರಂಗಳಿವಲ್ಲವಾ ।
ಪರದ ಮುತ್ತುಗಳೆಂಬ ಶಂಕೆಯನಾಗಿಕುಂ ಮಕರಾಕರಂ ॥ 886

ತಾಮ್ರಪರ್ಣ್ಣಿಯೊಳ್ ಶುಕ್ತಿಜಕ್ಕೆ ॥

ಕಂ ॥ ಜಿನರಾಜಭಿಕುಗೆ ಧರೆಯೊಳ್ ।
ಜನಿಯಿಸಲಂತಾನರೇಂದ್ರಪ[1]ತ್ನಿಯೆ ದೊರೆ ನೂ ॥
ತನಶುಕ್ತಿಜಕ್ಕೆ ತಾಯ್ವನೆ ।
ಯೆನಿಸಲ್ ದೊರೆ ತಾಮ್ರಪರ್ಣ್ಣಿ ತಾನೊಂದೆ ವಲಂ ॥ 887

ಇದು ಜಾತಿ ॥

## ಸೂತ್ರಂ ॥ 225 ॥

ಹಿಮವದಗೇಂದ್ರಮೆ ಭೂರ್ಜ್ಜ ।
ದ್ರುಮರಾಜಿಗೆ ಜನ್ಮಭೂಮಿ ಮಲಯಾದ್ರಿಯೆ ಬಂ ॥
ಹಿಮವಚ್ಚಂದನಮಹಿರುಹ ।
ಸಮಿತಿಗೆ ಕುಲಗೇಹಮಿತರದೊಳ್ ಪುಟ್ಟುವೊಡಂ ॥ 888

ಲಕ್ಷ್ಯಂ ॥

ಪ್ರಥಮಕ್ಕೆ ॥

ಕಂ ॥ ಪೆರೆಸುಲಿವ ಹಿಮವದವನೀ ।
ಧರಮೆಂಬುರಗಾಧಿಪತಿಯ ನಿರ್ಮ್ಮೋಕದೊಳೇಂ ॥
ದೊರೆಯಾದುವೊ ವಿ[2]ದ್ರುತಜ ।
ಜ್ಝರಭೂರ್ಜ್ಜದ್ರುಮವನಂಗಳಿಂದಚಳಂಗಳ್ ॥ 889

ದ್ವಿತೀಯಕ್ಕೆ ॥

ವೃ ॥ ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೇಳ್ವುವೆ ।
ತ್ತಿದು ಸಿರಿಕಂಡಮುಂ ಪ[3]ದೆದು ತೀಡವ ಗಾಳಿಯುಮಿಲ್ಲಿ ಪುಟ್ಟಿ ಪೋ ॥
ಗದು ಪೊಸ ಸುಗ್ಗಿ ಮೂಗುವಪದಿಲ್ಲಿಯ ಕೋಗಿಲೆ ಬಂದ ಮಾವು ಬೀ ।
ಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್ ॥ 890

ಇದು ದ್ರವ್ಯಂ ॥

---

1 ಪತಿಯೇ. 2 ವಿದ್ರುಮ. 3 ಪತೆದು.

## ಸೂತ್ರಂ || 226 ||

ಸುರಭಿಸಮಯದೊಳ್ ಕೋಕಿಳ |
ವಿ[1]ರುತಿನಿಬಂಧನಮನಬ್ದಕಾಲದೊಳ್ ಮಯೂ ||
ದ್ಧುರಕೇಕಿಮಧುರಕೇಕಾ |
ವಿರುತಿಯನಭಿಮುಕ್ತರಱಿದು ಪೇೞ್ವುದು ಕೃತಿಯೊಳ್ || 891

ಲಕ್ಷ್ಯಂ ||

ಕಂ || ಸುಗ್ಗಿಯ ಪುಗಿಲೊಳ್ ಮುಂಕೊಂ |
ಡುಗ್ಗಿಯನು[2]ಜ್ಜವಿಸಿದಂತೆ ಮೋನಮನುೞಿದೇಂ ||
ಬಗ್ಗಿಸಿದುವೊ ಕೋಗಿಲೆಗಳ್ |
ಮೊಗ್ಗಪ್ಪ ವಿಯೋಗಿಯಂ ಪು[3]ಗಲ್ ಪುಗಲೆನುತಂ || 892

ಘನಸಮಯದೊಳುದ್ಧರ್ ಶಿಖಾ |
ಸನದೊಳ್ ಶೈಳೇಯಸುರಭಿತಳದೊಳ್ ಗೋವ ||
ರ್ದ್ಧನಕಂದರದೊಳ್ ಶಿಖಿನ |
ರ್ತ್ತನಮಂ ನೀಂ ನೋಡ ಲಲಿತಕೇಕಾನ್ವಿತಮಂ || 893

ಇದು ಕ್ರಿಯೆ ||

## ಸೂತ್ರಂ || 227 ||

ಅವಿಶೇಷದಿನುದ್ಗಮದೊಳ್ |
ಧವಳತೆ ಮಾಣಿಕ್ಯನಿಕರದೊಳ್ ಶೋಣತೆ ಮೋ ||
ಘವಿತಾನದೊಳ್ ವಿನೀಳತೆ |
ವಿವಿಕ್ತವರ್ಣ್ಣವ್ಯವಸ್ಥೆಯಿಂದೊಂದಿಕ್ಕುರ್ಗಂ || 894

ಲಕ್ಷ್ಯಂ ||

ಪುಷ್ಪಶೌಕ್ಲ್ಯಕ್ಕೆ ||

ವೃ || ತಳಿರ ಮೇಗಣಲರೋಳಿಗಳೋ ಪೊಸಮುತ್ತುಗಳ್ |
ತೊಳಪುವೋ [4]ಪವಳದಂಕುರದೊಳ್ ಪುದಿದಿ[5]ಂತು ತ ||
ಮ್ಮೊಳೆ ವಿಚಾರಿಸಿ ಜನಂ ಕರಮೊಪ್ಪುವುದಾಯ್ತು ಪ |
ಲ್ಗಳ ಮುಗುಳ್ನಗೆಯ ಬಾಯ ಪಸುಗು ಲತಾಂಗಿಯಾ || 895

---

1 ವಿರುತ. 2 ನ.ಜ್ಜವಿಸದಂತೆ, ನುಜ್ಜ್ಯಸಿದಂತೆ. 3 ಪುಗಿಲ್ ಪುಗಿಲೆನುತಂ. 4 ವಾಪವಳ. 5 ದಂತು.

ಮಾಣಿಕ್ಯಶೋಣತ್ವಕ್ಕೆ ॥

ವೃ ॥ ತುಂಗವಿಚಿತ್ರಕೂಟನಿವಹಂಗಳೊಳೊಪ್ಪುವ ರತ್ನಸಂಕುಳಂ ।
ಗಳಂಗ[1]ಳ ಕೆಂಪು ತಳ್ತು ನಿಲೆ ಚೆ[2]ಚ್ಚರದಿಂ ಗಿರಿಗಳ್ಗಧೀಶ್ವರಂ ॥
ತಾಂ ಗಡಮೆಂದು ಮೇರುನಗದೊಳ್ ಪ್ರೋಣವರ್ಣಕ್ಕತಾಳಕ್ಕೆ ಮಂದು ನಾ ।
ರಂಗದ ತೊಂಗಲೇಱಿಸಿದ ಮಾಱ್ಕೆಯೊಳಿರ್ದ್ದಪುದು ವಿಂಧ್ಯಪರ್ವ್ವತಂ ॥ 896

ಮೇಘಕೃಷ್ಣತ್ವಕ್ಕೆ ॥

ಕಂ ॥ ಈಪುರುಷೋತ್ತಮನವ[3]ನೀ ।
ಳೋಪಳಸ[4]ಚ್ಛಾಯಕಾಯದೊಳ್ ಪೆಣೆದು ಘನ ॥
ವ್ಯಾಪಿತಗಭೀರರುಚಿಗನು ।
ರೂಪಂ ತಾನಕ್ಕೆ ನಿನ್ನ ತನು ತನುಮಧ್ಯೇ ॥ 897

ಇದು ಗುಣಂ ॥

ಇದು ಕವಿಸಮಯದೊಳ್ ನಿಯಮಾರ್ತ್ಥಪ್ರಕರಣಂ ತೃತೀಯಂ ॥

---

## ಐಕ್ಯಪ್ರಕರಣಂ.

### ಸೂತ್ರಂ ॥ 228 ॥

ದಾನವದೈತ್ಯಾಸುರಸಂ ।
ತಾನಕ್ಕಂ ನಾಗಸರ್ಪ್ಪಸಂ[5]ಹತಿಗಳ್ಗಂ ॥
ತಾನೇಕತ್ವಂ ಸಮಯಾ ।
ಧೀನಮುದಕ್ಕುಂ ರಸಾತಳಪ್ರತಿಬದ್ಧಂ ॥ 898

ಲಕ್ಷ್ಯಂ ॥

ವೃ ॥ ದನುಜರನಾಮುರಾರಿ ಗೆಲೆ ಕಾದುವ ಕಾಲದೊಳಾನದೇಕೆ ಪು[6] ।
ಟ್ಟೆನೊ ಗಡಮುಂದು ಪುಟ್ಟದೊಡೆ ದೈತ್ಯಕುಳಕ್ಕೆ ಕಳಂಕಮಾಗಲೀ ॥
ವೆನೆ ದನುಜಾರಿಯೆಂಬ ಬಿ[7]ರುದಂ ಸಲಲೀವೆನೆ ಕಾದಿ ಪೋಗಲೀ ।
ವೆನೆ ತಲೆದೋಱಲೀವೆನೆ ಮುಕುಂದನನೆಂದೊ[8]ಲೆವಂ ಬ[9]ಳಾಸುರಂ ॥ 899

ಸರ್ಪ್ಪನಾಗಂಗಳ್ಗೆ ॥

ವೃ ॥ ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ್ಪ ಸರ್ಪ್ಪಂಗಳಂ ಬ ।
ಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪ್ಪಂ ಬಲಂ ಕೇಳಿರೇ ನೀ ॥
ವೊಣರಿರ್ ಮತ್ತಮ್ಮ ಮಾತಂ ಗರುಡನಖಮುಖೋತ್ಪಾತದಿಂ ನಾಗಚೂಡಾ ।
ಮಣಿಗಳ್ ಬಂದಲ್ಲಿ ನಿಚ್ಚಂ ಸಿಡಿವುವಱಿವೆನೇಕಿಂತು ವಿಭ್ರಾಂತರ[10]ಪ್ಪಿರ್ ॥ 900

---

1 ಗಳೂ. 2 ಮುಚ್ಚರದಿಂ, ಚಚ್ಚರದಿಂ. 3 ವಿನೀ. 4 ಸುಚ್ಛಾಯ. 5 ಸಂತತಿ. 6 ಪುಟ್ಟನೆ, ಪುಟ್ಟನೆ.
7 ಪಿಸರಂ. 8 ದಲೆವಂ. 9 ಬಳಾಸುರು. 10 ರಪ್ಪರ.

## ಸೂತ್ರಂ ॥ 229 ॥

ಶಶಧರಲಕ್ಷ್ಮದೊಳಕ್ಯಂ ।
ಶಶಹರಿಣಂಗಳ್ಗನನ್ಯಭಾವಂ ಸುಮನೋ ॥
ವಿಶಿಖಧ್ವಜಾಂಕದೊಳ್ ನಿ ।
ರ್ವಿಶೇಷದಿಂ ಮತ್ಸ್ಯಮಕರಯುಗಳಕ್ಕೈಕ್ಯಂ ॥ 901

ಲಕ್ಷ್ಯಂ ॥

ಶಶಹರಿಣಂಗಳ್ಗೆ ॥

ವೃ ॥ ಉದಯಗಿರೀಂದ್ರರಂಧ್ರತಟದಿಂದೊಗೆತಂ[1]ದ ಶಶಾಂಕನೆಂಬ ಸೊಂ[2] ।
ಕದ ಮೃಗವೈರಿ ಕೂಡೆ ಪರಿದಬ್ಬರಿಸಿ ಪಬ್ಬಿರ್ದ ದು[3]ಸ್ತಮಸ್ತಮೋ ॥
ನ್ಮದಕರಿಯೂಥಮಂ ಪೆಳಱೆ ಪೋೞೆ ಪಿಸುಳ್ದ ತದುತ್ತಮಾಂಗದಿಂ ।
ಕೆದಱಿದ ಮೌಕ್ತಿಕಾವಳಿವೊಲಾದುವು ಮೂ[4]ಡಣ ತಾರಕಾಳಿಗಳ್ ॥ 902

ಕಂ ॥ ಕೊಳನಂ ಗಗನಂ ನೀರ್ವ್ವ ।
ಗಳನುಡುತತಿ ನೀರನಚ್ಚವೆಳ್ದಿಂಗಳ ತೆ ॥
ೞ್ಪೞಿಸೆ ಹರಿಣಾಂಕಮಂಡಳ ।
ಮಿಱಿಸಿದುದಳಿ ಪಾಯ್ದ ಬೆಳಿಯ ತಾವರೆಯಲರಂ ॥ 903

ಮತ್ಸ್ಯಮಕರಂಗಳ್ಗೆ ॥

ವೃ ॥ ಚಿತ್ತಜನಿಕ್ಷುಚಾಪದಳವಂ ಮಿಗೆ ಕೊಂಕಿದ ಪುರ್ವ್ವ ಕಣ್ಣ ಬೆ ।
ಳ್ಪೆತ್ತಮನಂಗರಾಜನರಲಂಬಿನ ಲೀಲೆಯನಾಳೆ ಕಾಮನಾ ॥
ರ್ದ್ದತ್ತಿದ ಮೀನಕೇತನಮನೊತ್ತರಿಸುತ್ತಿರೆ ಕೇಶಹಸ್ತಮು ।
ನ್ಮತ್ತಮರಾಳಗಾಮಿನಿ ಪೆಱಳ್ ರತಿಯಂ ಗೆಲೆವಂದು ನೋಡಿದಳ್ ॥ 904

ಧನು ಕಾಮಂಗಿಕ್ಷುದಂಡಂ ಪೞಯಿಗೆ ಮಕರಂ ಬಾಣಸಂಘಾತಮು[5]ಚ್ಚಂ ।
ನನೆಯೆಂಬೀಚಿಹ್ನಮಿಲ್ಲೆಂಬಿನಿತೆ ಮನಸಿಜಾಕಾರಮಾ[6]ಕಾರವೇಂ ಜಾ ॥
ಣನೊ ಧಾತ್ರಂ ರೂಪನಿಷ್ಪಾದನವಿಧಿಯೊಳಿವಂ ಮುನ್ನಮೇಂ ನೋಂಪಿಯಂ ನೋಂ ।
ತನೊ ಪೇೞೆಂಬಂತು ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ ॥ 905

ಇದು ಜಾತಿ ॥

## ಸೂತ್ರಂ ॥ 230 ॥

ಕ್ಷಾರಕ್ಷೀರಾಂಬುಧಿಗಂ ।
ಕ್ಷೀರೋದಭವಾತ್ರಿಜೇಂದುಗಳ್ಗಂ ಮು[7]ರಜಿ ॥
ನ್ನಾರಾಯಣರ್ಗಂ ಸಿರಿಗಂ ।
ಶ್ರೀರಾಮೆಗಮತನುಗಂ[8] ಭವಾರಿಗಮೈಕ್ಯಂ ॥ 906

---

1 ದಂಪೆ. 2 ನಾ । ಕದ. 3 ದುಸ್ತವೋಸ್ತವೋ. 4 ಮೂಡುವ. 5 ದುಚ್ಚಂ. 6 ಮಾಗಿದ್ರನೇ. 7 ಮುರರಿಪು, ಮುರಾರಿ. 8 ಗಂಬರಾರಿಗ.

ಕ್ಷಾರಕ್ಷೀರಾಂಬುಧಿಗಳ್ ||

ವೃ|| ಇದಱೊಳ್ ಗರ್ಭಂಗಳಂ ಕಟ್ಟುವುವಿನಕಿರಣಶ್ರೇಣಿಗಳ್ ಪಂಚರತ್ನ |
ಕ್ಕಿದು ದಲ್ ತಾನಾಕರಂ ನೀರ್ ತನಗೆ ಸವಿದೆಱಾದಗ್ನಿಯಿಂ ತಾಳ್ದಿ ದೆರ್ದ್ದ ||
ದ್ದಿರ್ದು ಚಂದ್ರಂ ಪುಟ್ಟಿದಂ ಮತ್ತಿದಱೊಳ್ ಸುರರುತ್ಪತ್ತಿ ಕೇಳಲ್ಲಿ ಶ[1]ಕ್ರಂ |
ಗವಿರ್ದೆಯ್ತಂದದ್ರಿಗಳ್ಗಾಶ್ರಯಮಿದಱೊಳದಭ್ರಾಭ್ರವೃಂದಂಗಳಿರ್ಕುಂ || 907

ವೇರು ಕಲಂಕೆಯುಂ ಕದಡಿತೋ ಬಡಬಾನಳನೞ್ಪೆ ಕಾಯ್ದುದೋ |
ಮಾರುತಿ ಕಟ್ಟೆ ಮೇಣ್ ಪಱಿದುದೋ ಗಿರಿಗಳ್ ಬರೆ ಸಜ್ಜೆಗೆಟ್ಟತೋ ||
ಸಾರಸಮಸ್ತವ[2]ಸ್ತುಗಳನಾರ್ಕೊರ್ಳ್ಳೆ ತಪ್ಪದೊ ಮತ್ತಮಂತೆ ಗಂ |
ಭೀರತೆ ಸಂದುದೆಂದು ಹರಿ ಮೆಚ್ಚೆ ಕರಂ ಪೊಗೞ್ದಂ ಸಮುದ್ರಮಂ || 908

ಕ್ಷೀರೋದಭವಾತ್ರಿಜೇಂದುಗಳ್ ||

ಕಂ|| ಅತ್ರಿಯ ಪಿರಿಯ ಮಗಂ ಭುವ |
ನತ್ರಯಸಂಸ್ತುತ್ಯಕೀರ್ತಿ ಸೋಮಂ ಸಕಲ ||
ಕ್ಷತ್ರಕುಲಪೂಜ್ಯನಮಲಚ |
ರಿತ್ರಂ ಪ್ರೋದ್ದಾಮಸೋಮವಂಶಲಲಾಮಂ || 909

ವೃ|| ಪಾರಾವಾರಂ ತುಹಿನಕಿರಣಂ ಕುಂದೆ ಕಾಂದಿತ್ತು ಮತ್ತಂ |
ತೋ[3]ರೊಂದೋರೊಂದಮೃತಕಳೆಯುಂ ಪೆರ್ಚ್ಚೆ ಪೆರ್ಚ್ಚಲ್ ಪಗಲ್ಗಳ್ ||
ತ್ತಾಗಂ ಮಕ್ಕಳ್ಗೆ ಜಗುವನಿತಂ ಬಂಧುಗಳ್ಗೀಯುದೊಳ್ [illegible] |
ಕ್ಕಾರಯ್ಯಾಗಳ್ ತನಯಜನಿತಸ್ನೇಹಮಾಗ್ಗರ್ಂ ಬಲಸ್ಥಂ || 910

ನಾರಾಯಣಮುರಾರಿಗಳ್ ||

ವೃ|| ಉರದೊಳ್ ಕೌಸ್ತುಭರತ್ನಮುಂ ಕಮಳೆಯುಂ ಶ್ರೀವತ್ಸಮುಂ ತೋಳ್ಗಳೊಳ್ |
ಕ[4]ರವಾಳ್ ಬಿಲ್ ಗದೆ ಚಕ್ರಶಂಖದೆ ಮೊಲಂಗಿರ್ದ್ದ [illegible] ಜಯಶ್ರೀ ನಿಜೋ ||
ದರದೊಳ್ ನೀರಜಗರ್ಭನುಂ ತ್ರಿಜಗಮುಂ ಪ್ರೋತ್ಫುಲ್ಲವೆಂದಂದಹೀ |
ಶ್ವರತಲ್ಪಂ ಯ[5]ದುವಂಶನಲ್ಲದೆ ಪೆಱಂ [illegible] [6] [illegible] || 911

ಶ್ರೀರಾಮಾವಿಭೂತಿಗಳ್ ||

ವೃ|| ಅಮೃತಪಯೋಧಿಮಂಥನದೆ ಪುಟ್ಟಿದ ಪದ್ಮದಳಾಂತರಾಳದೊಳ್ |
ರಮಿಯಿಪ ಪದ್ಮನಾಭನುರದೊಳ್ ನೆಲಸಿರ್ಪ [illegible] ||
ಕಮಳೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದ್ದ [illegible] |
ತ್ತಮಪುರುಷೋತ್ತಮಂ ಬೆ[8]ಸಸೆ ಪಾಂಡವರೊಳ್ ನೆಲಸಲ್ಕೆ ಪೋದಳಂ || 912

1 ಸಂಬ | [illegible]. 2 ವಸ್ತುಗಳಂ ಕೞಿಳ್. 3 [illegible]. 4 ಕರವಾಳುಂ ಗದೆ, ಕರವಾಲಂ ಗದೆ. 5 [illegible]. 6 [illegible]. 7 [illegible]. 8 ಬೆಸಸು, ಬೆಸಸಿ. 9 [illegible].

ಮನೋಜಶಂಕರಾರಿಗಳ್ಗೆ ॥

ವೃ ॥ ಸುರಭಿಶ[1]ರಂಗಳಂ ನಯನದೊಳ್ ಕುಡುಪುರ್ವ್ವಿನೊಳಿಕ್ಷುಚಾಪಮಂ ।
ಪರಿಚಿತಮೀನಕೇತನಮನಾವಗಮೊಪ್ಪುವ ಕೇಶಹಸ್ತದೊಳ್ ॥
ನಿರವಿಸಿ ಬಯ್ತು ಮೆಯ್ಗರೆದು ಶೂಲಧರಂಗ[2]ಗಿದಿರ್ಪ್ಪನಲ್ಲಿ ಪೆಂ ।
ಡಿಳ ಮಱೆಯೊಳ್ ಮನೋಜನೆನೆ ಚೆಲ್ವೆಸೆವರ್ ಕಡುಗಾಡಿಕಾರ್ತ್ತಿಯರ್ ॥ 913

ಇದು ದ್ರವ್ಯಂ ॥

ಸೂತ್ರಂ ॥ 231 ॥

ಮುಕುಳನನಿಮೀಳನಂಗಳ್ ।
ವಿಕಾಸಹಾಸಪ್ರಬೋಧನೋನ್ಮೇಷಂಗಳ್ ॥
ಪ್ರಕಟಸುಗುಮೈಕ್ಯಮಂ ನಿ ।
ರ್ವ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ ॥ 914

ಲಕ್ಷ್ಯಂ ॥

ಮುಕುಳನನಿಮೀಳನಂಗಳ್ಗೆ ॥

ಕಂ ॥ ಮುಕುಳಿತವಿಳೋಚನಂ ಕಂ ।
ಟಕಿತಾಂಗಂ ಸ್ವೇದಬಿಂದುದಂತುರಿತಮುಖಂ ॥
ಪ್ರಕಟಶ್ವಸಿತೋತ್ಕಂಪಂ ।
ನಿಕಾಮಕಮನೀಯಮಾದುದಿಂತು ರತಾಂತಂ ॥ 915

ವಿನಿಮೀಳನ್ನೀಲಾಂಬುಜ ।
ವನಮಿಷದ್ವಿಕಸದರುಣಸರಸಿರುಹವನಂ ॥
ದಿನಮುಖಮಳಿಸಂತತಿಗೇಂ ।
ಜನಿಯಿಸಿದುದೊ ಭಿನ್ನರುಚಿಗಳಂ ಪರಿಮಳದೊಳ್ ॥ 916

ವಿಕಾಸಹಾಸಂಗಳ್ಗೆ ॥

ವೃ ॥ ಪೊಸಮಿಸಿಲೊಳ್ ಮುಗುಳ್ಗಳ್ ಸಡಿಲ್ದುಸಿರ್ವ್ವಂತೆಸ ।
ಲ್ಕಿಸಗಿ ಮುಗುಳ್ನಗೆನಕ್ಕು ತೋಱೆ ಮದಾಳಿಗಳ್ ॥
ನುಸುಳೆ ತೊವರ್ತ್ತಿರೆ ಕಂಪಲರ್ಚ್ಚುವನಂಬುಜ ।
ಪ್ರಸರಮನಾಳೆ ಪಳಪ್ಪನೀಗೆ ಮರಂಗಳಂ ॥ 917

---

1 ಶಯಂ. 2 ಗಿದಿವರ್ಪ್ಪ.

ಅದಲ್ಲದೆಯುಂ ||

ವೃ || ನಗೆಯುಂ ಬಲ್ಮುಗುಳ್ಗಳ್ಗೆ ಕಂಪನೆಳೆಗಳ್ಗಾನಂದಮುಂ ಕೋಕಿಳಾ |
ಳಿಗೆ ಸೊರ್ಕ್ಕಂ ಗಿಳಿಗಳ್ಗೆ ಬೀರಬರಿಯುಂ ಕಾವಂಗೆ ಪೆರ್ಚ್ಚಂ ಪಿಕಾಳಿ ||
ಗಿಗೆ ಪೆರ್ಚ್ಚಂ ಪ್ರಿಯರ್ಗೆಯ್ದೆ ಮಾಡಿ ವಿ[1]ದಳತ್ಪುಷ್ಪಾಳಿ ತೇಂಗಾಳಿ ಪೀ|
ಡುಗುಮುಳ್ಳಾಡೆ ಸಮಸ್ತದಂಪತಿಗೆ[2]ಕ್ರೀಡಾಪರಿಶ್ರಾಂತಿಗಳ್ || 918

ಕಂ || ಅಲರ್ದ ಮೊಗಂ ಕಿಱಿದಾದುದು |
ನೆಲಸಿದುದಱಲೆರ್ದೆಯೊಳಪ್ಪುಕಣಿಸಿದ್ದರ್ಗವು ಚಾ ||
ಪಲನಪ್ಪುನಕುವಲಯಂ ಸು |
ಯ್ಯಲರಾದಂ ಬಿಸಿಯುವಾದುವಾಸತಿಗಾಗಳ್ || 919

ತೃ[3]ಷ್ಣಾಭಿಲಾಷಂಗಳ್ಗೆ ||

ಕಂ || ದೂ[4]ರಾವತೀರ್ಣ್ಣಪಂ[5]ಪಾ |
ವಾರಿಯುನಿ[6]ದನಱತು ಕ[7]ಱತು ತಳವೊಯ್ದುವಿನಂ ||
ನೀರಡಸಿ ನೀ[8]ರಜಾನನೆ |
ಪೀರಲ್ ಬಗೆದಪ್ಪುವೆನ್ನ ಕಣ್ಣುಂ ಮನಮುಂ || 920

ಇದು ಕ್ರಿಯೆ ||

## ಸೂತ್ರಂ || 232 ||

ಹರಿತಾಸಿತನೀಳಶ್ಯಾ |
ಮರೋಚಿಗಂ ಪೀತರಕ್ತವರ್ಣ್ಣಂಗಳ್ಗಂ ||
ದೊರೆಕೊಳ್ಗುಂ ಗೌ[9]ರಶ್ವೇ |
ತರುಚಿಗಮಿತರೇತರಾಶ್ರಯಂ ವೈಶ್ಯಕ್ಯಂ || 921

ಲಕ್ಷ್ಯಂ ||

ಕೃಷ್ಣಹರಿತಂಗಳ್ಗೆ ||

ವೃ || ಮರಕತತ್ವಿಷಮಾಯಮುನಾಜಳಂ |
ಸ್ಫುರದುರುಸ್ಫಟಿಕೋಪಳಕಾಂತಿಯೊಳ್ ||
ಬೆ[10]ರಸಿ ಗಂಗೆಯ ವಾರಿಯೊಳೊಪ್ಪುಗುಂ |
ಹರಿಹರದ್ವಯಸಂಗಮದಂದದಿಂ || 922

1 ವಿಗಳ್. 2 ಕುಳಕ್ಕಂ ಕಾಂತಿಗಳ್ ಕಾಂತಿಗಳ್. 3 ತೃಷ್ಣಾಭಿಲಾಷಾದಿಗಳ್ಗೆ. 4 ದೂರಾವತೀರ್ಣ. 5 ಗಂಗಾ. 6 ನೀರಪಿತು, ನಿದನಪ್ಪಿತು. 7 ಕಡಿತು, ಕುಡಿದು. 8 ನೀರಜಾಕ್ಷಿ, ನೀರಜಾಕ್ಷಿಯು. 9 ಶಾನಶ್ಯಂ. 10 ಪೊರಸಿ.

ನೀಲಶ್ಯಾಮಂಗಳ್ಗೆ ॥

ವೃ ॥ ಪದಧೂಳಿಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂಮಾಡಿ ಮಾಣ್ದ ।
ದ್ದುರ್ದದೆ ಕೋಪೋದ್ಭಿನ್ನಗಂಡಸ್ಥಳಕರಟಘಟಾವ್ಯೂಹನೀಲಾಂಬುದಾಟೋ ॥
ಪ[1]ದಿನತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ ।
ತದಿನರ್ಧ್ಧಶ್ಯಾಮಳಂಮಾಡಿದುದು ದಿ[2]ವಮುಮಂ ಕೂಡೆ ರಾಜೇಂದ್ರಸೈನ್ಯಂ ॥ 923

ಪೀತರಕ್ತಂಗಳ್ಗೆ ॥

ವೃ ॥ ಪ್ರವಿರಾಜತ್ಕಳಧೌತಪಿಂಗರುಚಿಶುದ್ಧಂ[3]ಷ್ಪಾಗ್ರದಿಂದಿಕ್ಕಿ ದಾ[4] ।
ನವರಂ ಧಾತ್ರಿಗೆ ರಾಗಮಾಗೆ ನೆಗಳ್ದಾದಿಕ್ರೋಡನಾಕಾರದಿಂ ॥
ತವೆ ಬೆಂಕೊಂಡು ತಮಸ್ತಮಪ್ರಕರಮಂ ಬಾಳಪ್ರವಾಳಾಂಕುರ ।
ಚ್ಛವಿಯಿಂ ಚಂದ್ರನುದಂಶುಲೇಖೆಯಿನದೊಂದಾ[5]ನಂದಮಂ ಮಾಡಿದಂ ॥ 924

ಅಂತುಮಲ್ಲದೆಯುಂ ॥

ವೃ ॥ ವಿದಳತ್ಕಿಂಶುಕಕಿಂಕಿರಾತಸುಮನಃಕಾಶ್ಮೀರಸಂಧ್ಯೋದಗ್ರತಾಂ ।
ಬುದಪೀ[6]ತಾಂಬರನಿಂದ್ರನೀಲವಿ[7]ಲಸನ್ನೀಲಾತಸೀನೀಲನೀ ॥
ರದನೀಲಾಂಬುಜವರ್ಣ್ಣನರ್ಣ್ಣವಮುಕಂ ಕೃಷ್ಣಂ ಧರಾದೇವಿಗೊ ।
ಪ್ಪಿದನಂತಜ್ಜ್ವಲದೌರ್ವ್ವವಹ್ನಿಲವಣಾಂಭೋರಾಶಿಲೀಲಾವಹಂ ॥ 925

ಗೌರಶ್ವೇತಂಗಳ್ಗೆ ॥

ಕಂ ॥ ಹಿಮವದ್ಗಿರಿಕ[8]ಟಕದಿನೊಗೆ ।
ದಮರಸರಿತ್ಸ್ರೋತಮೆಂಬ ಮಾತಂ ಪಡೆದೆಂ ॥
ಹಿಮಗೌರಹಾರಮೆಸೆಗುದೊ ।
ಹಿಮಶೈಲಶಿ[9]ಖಾವಿಶಾಲವಕ್ಷಸ್ಸ್ಥಲದೊಳ್ ॥ 926

## ಸೂತ್ರಂ ॥ 233 ॥

ನಯನಾದಿವಿವಿಧವರ್ಣ್ಣಾ ।
ಶ್ರಯಂಗಳೊಳ್ ಬೇಱಿವೇಱೆ ಬೇಱೊಂದನೆ ನಿ ॥
ರ್ಣ್ಣಯಮಪ್ಪ ವರ್ಣ್ಣವಂ ಸಮು ।
ದಯದಿಂದಂ ಪೇೞ್ಗೆ ಮೇಣ್ ಯಥಾಸಂಭವಮಂ ॥ 927

ಲಕ್ಷ್ಯಂ ॥

ಕಂ ॥ ಎವೆಯಿಕ್ಕದೆ ಪದಪಿಂ ನೋ ।
ಡುವ ಪುರಲಲನೆಯರ ಬಿಳಿಯ ಕಣ್ಗಳ ಬೆಳಗಿಂ ॥
ಧವಳಿಸಿದಂತೆವೊಲಾದುವು ।
ಗವಾಕ್ಷಜಾಳಂಗಳಮರಕತನಯಂಗಾಗಳ್ ॥ 928

1 ಪದಪ್ರಭಗ್ರಾ. 2 ದಿನ. 3 ಪ್ಪಾಷ್ಪಾಂಗದಿಂ. 4 ದಾ । ನವನಂ. 5 ದಾಕಾರಮಂ ತಾಳ್ದಿದಂ. 6 ನೀಲಾಂಬರ. 7 ವಿಕಸ. 8 ನಿಕಟದಿ. 9 ಶಿಖಾವಿಳಾಸ, ಶಿರೋವಿಳಾಸ.

ವೃ ॥ ಬದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟುಮಾಡೆ ಜ ।
ರ್ಪ್ಪಿದ ಕಡೆಗಣ್ಣ ಜರ್ವ್ವಗಳೊ ಮೋ[1]ದಿದ ನೆಯ್ದಿಲ ನೀಳ್ದ ಮಾಲೆಯಿಂ ॥
ದುದಿರ್ದ ಮಾದಂಗಳೊಳ್ ತೊಡರ್ದ ತೋರ್ಪ್ಪ ದಳಂಗಳೊ ಪೇೞುವೂವುದೆಂ ।
ಬು[2]ದನೆನೆ ಕಾ[3]ದ ಪೋದಿದವಿನಾಣಮು[4]ದಿಲ್ಲದಹೆಲ್ಲಿ ನಲ್ಲಳಾ ॥ 929

ಮಿಶ್ರವರ್ಣ್ಣಂಗಳ್ಗೆ ॥

ವೃ ॥ ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋಯಾಲೆ ।
ತ್ತಿದ ನೀಳೋತ್ಪಳಮಾಳೆಯಂ ದ್ವಿಗುಣಿಸಲ್ಕಾರ್ತ್ತು ಕರ್ಣ್ಣಾಂತಗಾ ॥
ಮಿ ದಳನ್ನೀಳಸರೋಜರೋಚಿ ಕುಮುದಜ್ಯೋತ್ಸ್ನಾವದಾತಪ್ರಭಂ ।
ಮು[5]ದನೋತ್ತೇಜಿತಬಾಣವಿಭ್ರಮಮಪಾಂಗಾಳೋಕನಂ ನಲ್ಲಳಾ ॥ 930

ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗ್ಗ ।
ಪ್ರಣಯಿನಿಯರಪಾಂಗಶ್ರೇಣಿಗ[6]ಳ್ ಮೂಱುಬಣ್ಣಂ ॥
ಪೆಣೆದೊದವೆ ಗವಾಕ್ಷಸ್ಥೇಂದುಕಾಂತೇಂದ್ರನೀಲಾ ।
ರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್ ॥ 931

ಇದು ಗುಣಂ ॥

## ಸೂತ್ರಂ ॥ 234 ॥

ಅನುಗತಮಪ್ಪಂತಿರೆ ಚೇ ।
ತನಧರ್ಮ್ಮಂಗಳಸಚೇತನಾರ್ತ್ಥಂಗಳೊಳಂ ॥
ಸ್ತನನಯನಾದಿಯೊಳಂ ದ್ವಿ ।
ತ್ವನಿಷ್ಠಮಂ ಜಾತಿಯುಂ ವಿವರ್ಣ್ಣಿಪರರೆಬರ್ ॥ 932

ಲಕ್ಷ್ಯಂ ॥

ಪೂರ್ವ್ವಾರ್ದ್ಧಕ್ಕೆ ॥

ವೃ ॥ ತೋಳ ಘಟ್ಟಣೆಗುಚ್ಚಳಿಸುತ್ತುಂ ಸೂಸುವ ಶೀಕರವಾರಿ ಮು ।
ರ್ತ್ತಿಯಿಂದಭಿಷೇಕಮೆ ಗೆಯ್ವಂತೊಪ್ಪೆ ಕಳಿಂದಜೆಯಂ ಮನೋ ॥
ಲೀಳೆಯಿಂ ಪುಗೆ ತನ್ನದಿ ಕೃಷ್ಣಂಗಾಟಿಸಿದಂತಿರೆ ಲೋಲಕ ।
ಲ್ಲೋಳಕೋಮಲಹಸ್ತದೆ ಪೊಯ್ದಳ್ ಮುಂದಲೆಯಂ ಕಮಳಾಕ್ಷನಾ ॥ 933

ಉತ್ತರಾರ್ದ್ಧಕ್ಕೆ ॥

ವೃ ॥ ಕಡೆದವೊಲಿ[7]ರ್ಪ್ಪ ಪರ್ಮ್ಮಲೆ ತೊದಳ್ನುಡಿ ಮೆಲ್ನಡೆ ಚೆಲ್ವನಪ್ಪ ತೆ ।
ಳ್ಪುಡು ನಳ್ತೋಳ್ ಪೊದಱ್ಬಧರವೊತ್ತರೆಯುಂ ನಿಱುಗೊಂಡ ಚುಂಚು ಸೋ ॥
ರ್ಮ್ಮಡಿ ಕಡುನುಣ್ಪುವೆತ್ತ ತೊಡೆ ತುಂಬಿದ ಪೀನನಿತಂಬಬಿಂ[8]ಬಮೊ ।
ರ್ಕ್ಕಡಿತೆಮೆನಿಪ್ಪ ಕಣ್ ಕರಮೆ ರಂಜಿಸೆ ಬಂದಳೇಕಕಾಂತೆಯರ್ ॥ 934

1 ಮೋದಿಪ, ನೊಡಿದ 2 ಬಿದ. 3 ಕಾದಿಮೊಟಿನ, ಕಾತಮಾದಿದ. 4 ಮುದಿಲ್ಲದೆಲೆಲ್ಲಿ, ಮುದಿಲ್ಲದಲಲ್ಲಿ.
5 ಮದನೋತ್ಪ್ರೇರಿತ. 6 ಚೊಳ್. 7 ಲಪ್ಪ. 8 ಮುತ್ತ.

## ಸೂತ್ರಂ ॥ 235 ॥ .

ಪದದೊಳ್ ಮಾೞ್ಪಂತಿರೆ ಮಾ ।
ೞ್ಪುದು ನಿತ್ಯಂ ಪಾದದೆಡೆಗಳೊಳ್ ಸಂಹಿತೆಯಂ ॥
ತುದಿಯೊಳಮರ್ಧದೊಳಂ ಮಾ[1] ।
ಡವಿರ್ಕೆ ಮೇಣ್ ಮಾೞ್ಕೆ ತಾನದೆಲ್ಲಿ ಯಥೇಷ್ಟಂ ॥ 935

ಲಕ್ಷ್ಯಂ ॥

ವೃ ॥ ಮೃಡನುಡುರಾಜಪನ್ನಗವಿರಾಜಿಜಟಾಮಕುಟಂ ಕಪರ್ದಿ ನೂ ।
ರ್ಮ್ಮಡಿ ಧವಳಂ ಸುರಾಸುರಕದಂಬಕಸೇವ್ಯಪದಾಂಬುಜದ್ವಯಂ ॥
ಅಡರೆ ಮೃಡಾನಿಗನ್ಯಕುಳಶೈಳಕುಳಂಗಳ ನಾಡೆ ರಯ್ಯಮ ।
ಪ್ಪೆಡೆಗಳನೆಲ್ಲಮಂ ನೆಱೆಯೆ ತೋರ್ಪ್ಪುದು ಪೇೞ್ಕೆಯೆ ಬಂದಸೀಶ್ವರಂ ॥ 936

ಕಂ ॥ ಸೋ[2]ತಂ ಪುರೋಹಿತಂ ಪೆರ ।
ಸಾತತಶಿಬಿರಪ್ರಭೇದನೋಪಾಯದಿಂದಂ ॥
ದಾತವಮಂ ಕಿಡಿಸಲ್ ಸಂ ।
ಜಾತನಯಂ ಬ[3]ಗೆದು ತದ್ಗೃಹಾಭಿತ್ತಿಗಳೊಳ್ ॥ 937

ಇಲ್ಲಿಯೆ ಪೇೞ್ವೆಂದು ಮಹೀ ।
ವಲ್ಲಭದೂತಂಗೆ ನು[4]ಡಿಯೆ ದಶನಾಂಶುಗ[5]ಳಂ ॥
ನೊಲ್ಲನೆ ದಂ[6]ತಚ್ಛದಮೃದು ।
ಪ[7]ಲ್ಲವದೊಳ್ ನಿಱಿಸಿ ಮರಳೆ ದೂತಂ ನುಡಿದಂ ॥ 938

ಅರಸುಗಳೆಲ್ಲಂ ಬಾಯ್ಕ್ಕೇ ।
ೞ್ದರೆಂದುಮಾಶಾಂತರಂಗಳಳ್ಕಿದುವೆಂ[8]ದುಂ ॥
ಧರಣಿತಳಂ ಬಣ್ಣಿಸೆ ಕೇ ।
ೞ್ದು ರಾಗಿಸುತ್ತಿರ್ಪ್ಪುದಿನ್ನುಮೇಂ ತೊದಳುಂಟೇ ॥ 939

* ಎರಡಱೊಳಂ ಚಂದ್ರಾದಿ ।
ತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ॥
ಸ್ಫುರಿತಮಣಿರತ್ನದೊಳಮಂ ।
ತರಿಸುತ್ತುಂ ಯೋಜನಕ್ಕಮಂತೊಂದೊಂದಂ ॥ 940

---

1 ಆೞ. 2 ಅಶಂ. 3 ಬೆರಪುಕಂಪುಗ್ರಹಭಿತ್ತಿ, ಬರೆದು. 4 ನುಡಿದು. 5 ಗಳಂ. 6 ದಶನ.
7 ಪಲ್ಲವದೊಳ್ ಮಱಿಸಿಮಾಸೆ. 8 ವೆಂಟುಂ. * ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಇದೆ.

## ಸೂತ್ರಂ ॥ 236 ॥

ಸಂಬಂಧದ ಸಂಬಂಧದೊ ।
ಳಂ ಬಹುಳಂ ಷಷ್ಠಿಯಕ್ಕುಮೊಂದಿರೆ ನೆಗೞ್ಗಂ ॥
ಬಿಂಬಾಧರಾದಿಶಬ್ದಮೊ ।
ಡಂಬಟ್ಟಿರೆ ಮಧ್ಯಪದವಿ[1]ಲೋಪಿಸಮಾಸಂ ॥ 941

ಲಕ್ಷ್ಯಂ ॥

ಕಂ ॥ ಕಮಳದ ಕೋಮಳಕಂದಾ ।
ಗ್ರಿಮಾಂಕುರಾಸ್ವಾದಮಾ[2]ದಮೊದವಿಸೆ ಮುದಮಂ ॥
ಕಮಳಾಕರದೊಳ್ ಹಂಸಂ ।
ರಮಿಯಿಸುಗುಂ ಪದ್ಮಿನೀರಜೋರುಣಿತಾಂಗಂ ॥ 942

ಬಿಂಬಾಧರಕಾಂತಿಪ್ರತಿ ।
ಬಿಂಬಂ ಸುಲಿಪಲ್ಲೊಳ್[3]ಸೆಯೆ ಪಲ್ ಸುಲಿಯುವೆ ಗೆ ॥
ತ್ತೇಂ ಬಾಲೆ ಮುಗ್ಧೆಯೋ ಮ ।
ತ್ತಂ ಬಿಡದಡಿಗಡಿಗೆ ನೋಡುವಳ್ ಕನ್ನಡಿಯಂ ॥ 943

## ಸೂತ್ರಂ ॥ 237 ॥

ಭಂಗುರಭಿದುರಚ್ಛಿದುರಪ ।
ದಂಗಳ್ ಸಲೆ ಕರ್ಮಕ[4]ರ್ತೃವೊಳ್ ಕರ್ತೃವೊಳಂ ॥
ಸಂಗತಿವೆತ್ತಿರ್ಕುಂ ಕವಿ ।
ಪುಂಗವಸಮಯವ್ಯವಸ್ಥೆಯಿಂದಂ ಕೃತಿಯೊಳ್ ॥ 944

ಲಕ್ಷ್ಯಂ ॥

ವೃ ॥ ಭಂಗುರಕೇಶಿ ನಲ್ಲನ ತಳಂಗಳೊಳೊಯ್ಯನೆ ಮೆಯ್ಯನಿಕ್ಕೆ ಮಿಂ[5] ।
ಚಿಂಗೆಣೆಯಾಗಿ ತಳ್ತು ಕೊರಲಂ ಬಿಗಿಯಪ್ಪಿ ಕಟಿಪ್ರದೇಶಮಂ ॥
ಪಿಂಗದಿಜುಂಕೆ ತನ್ನೆರಡುಮೂರುಗ[6]ಳಿಂ ಪಡೆದಳ್ ಸಿ[7]ಜಾಂಗಸಂ ।
ಸಂಗದಿನಾಲತಾಂಗಿ ತನಗಂ ಖ[8]ಚರಂಗಮನಂಗರಾಗಮಂ ॥ 945

ಕಂ ॥ ಸಂ[9]ಗತನಿಜಹಸ್ತಕನಿ ।
ಷ್ಠಾಂಗುಲಿಧೃತಮಂ ಪ್ರಿಯಾಮನಃಖೇದಲತಾ ॥
ಭಂಗುರಮಂ ರವಿಮಂಡಳ ।
ದುಂಗುರಮಂ ರಘುಜನಿತ್ತನಣುವನ ಕೆಯ್ಯೊಳ್ ॥ 946

---

1 ವಿಲೋಪ. 2 ಮಾಗಳೊಡವಿತೆ. 3 ಳಿರ್ಪ. 4 ಕರ್ತೃಕರ್ಮ ಕರ್ತೃವೊಳಂ, ಕರ್ತೃವೇಕಾರ್ತರವೊಳಂ. 5 ವಿಪಾಳಿಂಗಣೆ. 6 ಗಳಿಂ. 7 ನಿಜೇಶಮಾತ್ಸಂಗದಿ. 8 ಸುಖಸಂಗಮನಂಗರಾಗದಿಂ. 9 ಸಂಗತನಿಜಮಸ್ತಕ.

ಸೂ ॥ ಅತ್ತಣಿಂ ತ್ವ[1]ನುಸಂಧೇಯಃ ಪಂಚಮ್ಯಾಃ ॥ 66 ॥

ವೃ॥ ಪಂಚಮ್ಯಂತಸ್ಯ[2]ಶಬ್ದಸ್ಯ ತದಭಿವ್ಯಕ್ತಯೇ ಪುನಸ್ತದಂತೇ ಅತ್ತಣಿಮಿತಿ ಶಬ್ದೋಽನುಸಂಧೇಯಃ ಅ[3]ನುಪ್ರಯುಜ್ಯತ ಇತ್ಯರ್ಥಃ ॥

ಉ॥ ಊರತ್ತಣಿಂ ಬಂದಂ, ಅವನತ್ತಣಿಂ ಭಯಂ, ಕೆಱೆಯತ್ತಣಿಂ ತಂದಂ.

ಟೀ॥ ಪಂಚಮ್ಯಾಃ=ಪಂಚಮೀವಿಭಕ್ತಿಗೆ. ಅತ್ತಣಿಂ=ಅತ್ತಣಿಂ ಎಂಬ ಶಬ್ದಂ. ಅನುಸಂಧೇಯಃ=ಪತ್ತಿಸಲ್ಪಡವೇಳ್ಕುಂ. ಉ॥ (ವೃ. ನೋ.)

ಸೂ ॥ ದೀರ್ಘಾದೇಶಃ ಷಷ್ಠ್ಯಾ ಯಥೇಷ್ಟಂ ॥ 67 ॥

ವೃ ॥ ಷಷ್ಠ್ಯಂತಸ್ಯ ಶಬ್ದಸ್ಯ ದೀರ್ಘಾದೇಶಃ ಕಾಮಚಾರತೋ ವೇ[4]ದಿತವ್ಯಃ ॥

ಉ॥ ನ[5]ರೇಂದ್ರನಾ ಪರಿಜನಂ, ಎಸೆದತ್ತಾಲೋಕಮಾಕಾಂತೆಯಾ, ಪೆರ್ಮೆ ಧರ್ಮದಾ. ಕಾ[6]ಮಚಾರಾದಿಹ ನ ಭವತಿ । ಮದನನ ಕೆಯ್ಪುವೆಲ್ಲಿದನನಂಗನ ಕೆಯ್ಪಿಡಿಯಲ್ಲಿದಂ.

ಟೀ॥ ಈ ಕರ್ಣಾಟಕಭಾಷೆಯೊಳ್, ಷಷ್ಠ್ಯಾಃ=ಷಷ್ಠೀವಿಭಕ್ತಿಗೆ. ಯಥೇಷ್ಟಂ=ಇಷ್ಟಪ್ಪಂತು. ದೀರ್ಘಾದೇಶಃ=ದೀರ್ಘಾದೇಶಮಕ್ಕುಂ. ಉ॥ (ವೃ. ನೋ.)

ಸೂ ॥ ದ್ವಿತೀಯಾಂತಸ್ಯ ವಾ ಸ್ವರೇ ॥ 68 ॥

ವೃ ॥ ದ್ವಿ[7]ತೀಯಾಂತಸ್ಯ ಪದಸ್ಯ ಸ್ವರೇ ಪರೇ ವಾ ದೀರ್ಘೋ ಭವತಿ ॥

ಹ[8]ರಿಪಾಲಪ್ರಯೋಗಃ—ಕಲ್ಲಾನೇಱಿದಂ, ಕಲ್ಲನೇಱಿದಂ; ಬಿಲ್ಲಾನೇಱಿಸಿದಂ, ಬಿಲ್ಲನೇಱಿಸಿದಂ. ತಥಾ ಗುಣವರ್ಮಕವಿಪ್ರಯೋಗಃ—

ಎ[9]ನಿತ್ತನಿತ್ತಂಬುಜಪತ್ರನೇತ್ರೆಯಾ ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತಂ ವನದೊಳ್ ವನೇಚರಂ ।
ತನತ್ತು ಬಿಲ್ಲಾನದನೊತ್ತಿ ಕೇಸುಗುಂ ॥

ಟೀ॥ ದ್ವಿತೀಯಾಂತಸ್ಯ=ದ್ವಿತೀಯಾವಿಭಕ್ತ್ಯಂತಮಪ್ಪ ಪದಕ್ಕೆ. ಸ್ವರೇ=ಸ್ವರಂ ಪರಮಾಗೆ. ವಾ=ವಿಕಲ್ಪದಿಂ ದೀರ್ಘಮಕ್ಕುಂ. ಉ॥ ಬಿಲ್ಲಂ, ಬಿಲ್ಲಾಂ.

ಮತ್ತಮನ್ಯವ್ಯಾಕರಣಸೂತ್ರಮಿಂತೆಂದಪುದು—

---

1 ಚಾನುಸಂಧೇಯಃ. 2 ಪಶ್ಚಾಭಿವ್ಯಕ್ತಯೇ. 3 ಇದು ಒಂದು ಪ್ರತಿಯಲ್ಲಿ ಮಾತ್ರ ಇದೆ. 4 ವಿಧಾತವ್ಯಃ. 5 ನೃಪೇಂದ್ರನಾ. 6 ಕಾಮಚಾರತ್ವವಿಧಾನಾತ್ತ್ವ ಭವತಿ ನ, ಕಾಮಚಾರತೋ ದೀರ್ಘೋ ನ ಭವತಿ, ಯಥೇಷ್ಟ, [illegible] 7 ದ್ವಿತೀಯಾವಿಭಕ್ತ್ಯಂತಸ್ಯ ಸ್ವರೇ ಪರೇ. 8 ಒಂದು ಪ್ರತಿಯಲ್ಲಿ ಹರಿಪಾಲಪ್ರಯೋಗಃ—ಎಂಬುದು [illegible] ಇಲ್ಲ, ತಥಾ ಗುಣವರ್ಮಕವಿಪ್ರಯೋಗಃ—ಎಂಬುದೂ ಅದರ ಕೆಳಗೆ ಕೊಟ್ಟಿರುವ ಉದಾಹರಣಪದ್ಯವೂ ಇಲ್ಲ. 9 ಕಾವ್ಯಾವಲೋಕನ, ಪದ್ಯ 359.

ಆ[1]ದಿಸ್ವರಪದಮಂತ್ಯಹೊ।
ಳಾದೆಡೆಯೊಳ್ ದೀರ್ಘಮಕ್ಕುಮೆರಡನೆಯ ವಿಭ॥
ಕ್ತ್ಯಾದಾನಪದಂ ದೀರ್ಘಂ।
ಮಾಬಾಂತ್ಯದೊಳಱಿದ ತಾವಿನೊಳ್ ಸ್ವಚ್ಛಂದಂ॥

ಇದರ್ಕೆ ಗುಣವರ್ಮನ ಪ್ರಯೋಗಂ—(ವೃ. ನೋ.)

ಮತ್ತಂ ಶಿಷ್ಟಪ್ರಯೋಗಂ—

ನೃ[2]ಪನಾನಭಿನುತಮನನಾ।
ನುಪಮೇತರನಾನಪಾರಕೀರ್ತಿಧ್ವಜನಂ॥
ವಿಪುಳಗುಣಜ್ಞನನುಚಿತನ।
ನಪಗತದೋಷನನುದಾರಚರಿತ್ರೋದಯನಂ॥

ಇಂತು ದ್ವಿತೀಯೆ ಪಿರಿದುಂ ದೀರ್ಘಪ್ರಯೋಗಂ ವಿರಸಂ ಶಿಥಿಲಬಂಧಮೆನಿಸುಗುಂ.

ನೃ[2]ಪನನಭಿಮಾನಧನನನ।
ನುಪಮನನತಿಶಯವಿಶಾಲಕೀರ್ತಿಧ್ವಜನಾ॥
ನುಪಚಿತಗುಣನಾನುಚಿತನ।
ನ[3]ಪಗತದೋಷನನುದಾರಚರಿತೋದಯನಂ॥

## ಸೂ ॥ ಸಪ್ತಮ್ಯಾ ಅಲ್ಲಿ ವಾ ॥ 69 ॥

ವೃ॥ ಲಿಂ[4]ಗಸಂಜ್ಞಕಾದ್ವಿಹಿತಾಯಾಃ ಸಪ್ತಮ್ಯಾಃ ಸ್ಥಾನೇ ಅಲ್ಲಿ ವಾ ಭವತಿ॥

ಉ॥ ಮನದೊಳ್, ಮನದಲ್ಲಿ; ಬನದೊಳ್, ಬನದಲ್ಲಿ.

ಟೀ॥ ಸಪ್ತಮ್ಯಾಃ=ಲಿಂಗದತ್ತಣಿಂ ಪರಮಾದ ಸಪ್ತಮೀವಿಭಕ್ತಿಯ 'ಒಳ್' ಎಂಬಲ್ಲಿ. ವಾ=ವಿಕಲ್ಪದಿಂ. ಅಲ್ಲಿ='ಅಲ್ಲಿ' ಎಂಬುದಕ್ಕುಂ. ಉ॥ (ವೃ. ನೋ.)

## ಸೂ ॥ ಆಮಂತ್ರಣೇ ಪ್ರಥಮೈಕವಚನಸ್ಯ ಲೋಪಃ ॥ 70 ॥

ವೃ॥ ಆಮಂತ್ರಣಾರ್ಥೇ ವಿಹಿತಸ್ಯ ಪ್ರಥಮೈಕವಚನಸ್ಯ ಲೋಪೋ ಭವತಿ॥

ಉ॥ ಎಲೆ ದೇವ, ಎಲೆ ಭೂಪ, ಎಲೆ ಅಣ್ಣ, ಎಲೆ ಅಕ್ಕ.

ಟೀ॥ ಆಮಂತ್ರಣೇ=ಸಂಬೋಧನೆಯುಲ್ಲಿ. ಪ್ರಥಮೈಕವಚನಸ್ಯ=ಪ್ರಥಮೈಕವಚನದ ಮಕಾರಕ್ಕೆ. ಲೋಪಃ=ಲೋಪಮಕ್ಕುಂ. ಉ॥ (ವೃ. ನೋ.)

## ಸೂ ॥ ಏ[5]ತ್ವಂ ವಾ ತದಂತಸ್ಯ ॥ 71 ॥

ವೃ॥ ಆ[6]ಮಂತ್ರಣಾರ್ಥೇ ವರ್ತಮಾನಸ್ಯ ಪ್ರಥಮಾವಿಭಕ್ತೇರೇಕವಚನಸ್ಯ ಏತ್ವಂ ವಾ ಭವತಿ॥

---

1 ಕವಿರಾಜಮಾರ್ಗ 2—15. 2 ಡಿಟೋ. 2—16. 3 ನಪೇತದೋಷ. 4 ಲಿಂಗಸಂಜ್ಞಾಯಾಂ ವಿಹಿತಾಯಾಃ. 5 ವಾಮಂತ್ರಣ ಪ್ರಥಮಾಯಾ ಏತ್ವಂ. 6 ಆಮಂತ್ರಣಪ್ರಥಮೈಕವಚನಸ್ಯ ವಿಕಲ್ಪೇನ ಏತ್ವಂ ಭವತಿ.

ಉ॥ ಎಲೆ ಮಂದಾನಿಲನೇ, ತಂಬೆಲರೇ, ಮಾವೇ, ಮಲ್ಲಿಗೆಯೇ, ಇಂದೋಳವೇ.

ವಾ[1]ಶಬ್ದೋಯಂ ವ್ಯವಸ್ಥಿತವಿಭಾಷಾಯಾಂ ವರ್ತಮಾನೋ ಗೃಹ್ಯತೇ । ತೇನ ಕ್ವಚಿನ್ನ ಭವತಿ—ಎಲೆ ದೇವ, ಎಲೆ ಭೂಪ, ಇತ್ಯಾದಿ.

ಟೀ॥ ತದಂತಸ್ಯ=ಆಮಂತ್ರಣಾರ್ಥದಲ್ಲಿ ವರ್ತಿಸುವ ಪ್ರಥಮಾವಿಭಕ್ತಿಯ ಏಕವಚನದ ಮಕಾರಕ್ಕೆ. ವಾ=ವಿಕಲ್ಪದಿಂ. ಏತ್ವಂ=ಏಕಾರಮಕ್ಕುಂ. ಉ॥ (ವೃ. ನೋ.)

ಸೂ ॥ ಇರಾಶ್ಲೇಷೋ ಗಳಃ ಸಂ[2]ಬೋಧನ ವಿಷಯೇ ॥ 72 ॥

ವೃ॥ ದ್ವಿ[3]ತ್ವಬಹುತ್ವಯೋರ್ವರ್ತಮಾನಸ್ಯ ಗಳಃ ಇರಾಶ್ಲೇಷೋ ಭವತಿ ಸಂಬೋಧನ ವಿಷಯೇ ॥

ಉ॥ ದೈವಂಗಳಿರ, ದೇವತೆಗಳಿರ, ಮಾಮರಂಗಳಿರ, ನಂದನಂಗಳಿರ.

ಇ[4]ರೋ ಗಳ ಇತಿ ಪಂಚಮ್ಯಾ ಸಿದ್ಧೇ ಆಶ್ಲೇಷಗ್ರಹಣಂ ದ್ವಿತ್ವಬಹುತ್ವವ್ಯಕ್ತ್ಯರ್ಥಂ । ತೇನ ಕ್ವಚಿದಿರೋ ಭವತಿ—ನಂಟರಿರ, ನಲ್ಲರಿರ, ಪಂಡಿತರ್ಕಳಿರ, ತಾಯ್ವಿರ್ಕಳಿರ.

ಟೀ॥ ಸಂಬೋಧನವಿಷಯೇ=ಆ ಸಂಬೋಧನೆಯಲ್ಲಿ. ಗಳಃ=ದ್ವಿತ್ವಬಹುತ್ವಕ್ಕೆ ಉಕ್ತಮಾದ ಗಳ್ ಪ್ರತ್ಯಯದ ಮುಂದೆ. ಇರಾಶ್ಲೇಷಃ=ಇರಾಗಮಮಕ್ಕುಂ.
ಉ॥ (ವೃ. ನೋ.)

ಅನ್ಯಪ್ರಯೋಗಂ—

ಸು[5]ರತರುನಂದನಂಗಳಿರ ರತ್ನಖಿನದ್ಧವಿಮಾನಕುಟ್ಟಿಮಾಂ ।
ತರಸುರತಾಲಯಂಗಳಿರ ಚಾರುವಿಲೋಲಕಟಾಕ್ಷಪಾತಸುಂ ॥
ದರಪರಿವಾರದೇವಿಯರಿರಾ ಕಡುಕೆಯ್ದು ಕೃತಾಂತನಿಂತು ನಿ ।
ರ್ನೆರಮೊಱೆದುಯ್ವೊ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪುದೇ ॥

ಸೂ ॥ ದೀರ್ಘೋಕ್ತಿರ್ನಯಸೇನಸ್ಯ ॥ 73 ॥

ವೃ॥ ಸಂಬೋಧನಾರ್ಥೇ ವರ್ತಮಾನಸ್ಯ ಸರ್ವಸ್ಯಾಪಿ ಶ[6]ಬ್ದಸ್ಯ ನಯಸೇನಮುನೇ ರ್ಮತೇ ದೀ[7]ರ್ಘೋಕ್ತಿರ್ಭವತಿ ॥

ಉ॥ ದೇವಾ ಬಿನ್ನಪಂ, ದೇವ ಬಿನ್ನಪಂ; ಸುಗ್ಗೀ, ಸುಗ್ಗಿ; ವಿಧೂ, ವಿಧು; ಕಾಂತೇ, ಕಾಂತೆ; ಗಿ[8]ಳಿಗಳಿರಾ, ಗಿಳಿಗಳಿರ.

ಟೀ॥ ನಯಸೇನಸ್ಯ=ನಯಸೇನಾಚಾರ್ಯನ ಮತದಿಂ. ದೀರ್ಘೋಕ್ತಿಃ=ಸಂಬೋಧನೆಯೊಳ್ ದೀರ್ಘಾದೇಶಮಕ್ಕುಂ. ಉ॥ (ವೃ. ನೋ.)

ಇತಿ ಕರ್ಣಾಟಕವ್ಯಾಕರಣವಿವರಣೇ ವಿಭಕ್ತಿವಿಧಾನಂ ನಾಮ
ತೃತೀಯಃ ಪರಿಚ್ಛೇದಃ.

---

1 ವಾಶಬ್ದೇನ ಕ್ವಚಿನ್ನ ಭವತಿ. 2. ಸಂಬೋಧನವಿಷಯೇ ಎಂಬುದು ಒಂದು ಪ್ರತಿಯಲ್ಲಿಲ್ಲ. 3 ಸಂಬೋಧನದ್ವಿತ್ವಬಹುತ್ವವಿಷಯೇ ಗಳಂತೇ ಇರಾಶ್ಲೇಷೋ ಭವತಿ. 4 ಈ ಭಾಗವು ಒಂದು ಪ್ರತಿಯಲ್ಲಿ ಮಾತ್ರ ಇದೆ. 5 ಕಾವ್ಯಾವಲೋಕನ, ಪದ್ಯ 130. ಆದಿಪುರಾಣ, 3—4. 6 ಶಬ್ದರೂಪಸ್ಯ. 7 ದೀರ್ಘೋ ಭವತಿ. 8 ಇದಕ್ಕೆ ಹಿಂದೆ ನವೋ ನವೋ ಎಂದು ಒಂದು ಪ್ರತಿಯಲ್ಲಿದೆ.

# 4. ಕಾರಕವಿಧಾನಂ.



## ಅ[1]ಥ ಕಾರಕಂ ನಿರೂಪ್ಯತೇ.

ಟೀ॥ ಅಥ = ಸಂಜ್ಞಾಸಂಧಿವಿ[2]ಭಕ್ತಿವ್ಯಾಖ್ಯಾನಾನಂತರಂ. ಕಾರಕಂ = ಕರ್ತೃಕರ್ಮಕರಣಸಂಪ್ರದಾನಾಪಾದಾನಸ್ವಾಮ್ಯಾಧಿಕರಣಂಗಳೆಂಬ ಪೆಸರನುಳ್ಳ ಕಾರಕಂ. ಯಥಾಕ್ರಮದಿಂ, ನಿರೂಪ್ಯತೇ = ಪೇೞಲ್ಪಡುತ್ತಿರ್ಪುದು.

### ಸೂ ॥ ಲಿಂಗಾರ್ಥವಚನಮಾತ್ರೇ ಪ್ರಥಮಾ ॥ 74 ॥

ವೃ ॥ ಲಿಂಗಾರ್ಥವಚನಮಾತ್ರೇ ವಿವಕ್ಷಿತೇ ಪ್ರಥಮಾವಿಭಕ್ತಿರ್ಭವತಿ ॥

ಉ ॥ ಲಿಂ[3]ಗಮಾತ್ರೇ ತಾವತ್ —ದೇವಂ, ನೃಪಂ; ನಾರಿ, ನಲ್ಲಳ್; ಕುಲಂ, ಜ[4]ಲಂ. ಅರ್ಥಮಾತ್ರೇ—ಉಚ್ಚಂ, ನೀಚಂ.[5] ವಚನಮಾತ್ರೇ—ಬಂದಾನುಂ, ಎರಡಾನುಂ.

ಟೀ ॥ ಲಿಂಗಾರ್ಥವಚನಮಾತ್ರೇ = ಲಿಂಗದಲ್ಲಿಯುಂ ಅರ್ಥದಲ್ಲಿಯುಂ ವಚನದಲ್ಲಿಯುಂ. ಪ್ರಥಮಾ = ಪ್ರಥಮಾವಿಭಕ್ತಿಯಪ್ಪುದು. ಉ ॥ (ವೃ. ನೋ.)

### ಸೂ ॥ ಸಂಬೋಧನೇ ಚ ॥ 75 ॥

ವೃ ॥ ಸಂಬೋಧನಮಭಿಮುಖೀಕ[6]ರಣಂ ತ[7]ದರ್ಥೇಽಪಿ ಪ್ರಥಮಾವಿಭಕ್ತಿರ್ಭವತಿ ॥

ಉ ॥ ನೃಪೇಂದ್ರ, ಕಾಂತೆ, ಕೆೞಯನೇ, ವನಮೆ, ವಸಂತನೆ.

ಟೀ ॥ ಸಂಬೋಧನೇ ಚ = ಸಂಬೋಧನೆಯೆಂಬುದು ಇದಿರೊಳಿರ್ಪರಂ ತನ್ನತ್ತಲ್ ಮುಂದುಮಾಡಿಕೊ[8]ಳ್ವುದು ಪೆಸರ್, ಆ ಸಂಬೋಧನೆಯಲ್ಲಿಯುಂ ಪ್ರಥಮಾವಿಭಕ್ತಿಯಪ್ಪುದು. ಉ ॥ (ವೃ. ನೋ). ಅನ್ಯಪ್ರ[9]ಯೋಗಂ—

ನೀಲಾಳಕೆ ಮಂಜುಳಮೃಗ ।
ಬಾಲೇಕ್ಷಣೆ ತುಂಗಕುಚೆ ಸರೋಜಾಸ್ಯೆ ಲಸ ॥
ದ್ವ್ಯಾಲಗಜಗಮನೆ ನಿ[10]ನ್ನುಮ ।
ನಾಲೋಕಿಸಿ ಸೋಲದಿರ್ಪ ಗಂಡರುಮೊಳರೇ ॥

---

1 ಈ ವಾಕ್ಯವು ಕನ್ನಡಟೀಕೆಯಲ್ಲಿ ಮಾತ್ರ ಇದೆ; ಇತರಪ್ರತಿಗಳಲ್ಲಿಲ್ಲ. ಇದು ಸೂತ್ರವಾಗಿ ತೋರುವುದಿಲ್ಲ. 2 ವಿಭಕ್ತಿ ಪದಸಿದ್ಧಿವ್ಯಾಖ್ಯಾನಾನಂತರಂ. 3 ಲಿಂಗೇ. 4 ಜನಂ. 5 ಇದರಮುಂದೆ, ಅತ್ರ ಅಕೋ(ನು)ಸ್ವಾರ ಇತ್ಯನುಸ್ವಾರಃ— ಎಂದು ಒಂದು ಪ್ರತಿಯಲ್ಲಿ ಮಾತ್ರ ಇದೆ. 6 ಕರಣಮಾತ್ರಂ. 7 ತಸ್ಮಿನ್ ವಿವಕ್ಷಿತೇ. 8 ಕೊಳ್ವುದು. 9 ಗ್ರಂಥಲಕ್ಷಣಂ. 10 ನಿನ್ನನು । ನಾಲೋಕಿಸಿ.

## ಸೂ ॥ ಕ[1]ರ್ಮಣಿ ದ್ವಿತೀಯಾ ॥ 76 ॥

ವೃ ॥ ಯ[2]ತ್ಕ್ರಿಯತೇ ತತ್ಕರ್ಮ ಉಚ್ಯತೇ । ತ[3]ದೇಕಂ ನಿರ್ವರ್ತ್ಯಂ ವಿಕಾರ್ಯಂ ಪ್ರಾಪ್ಯಂ ವೈ[4]ಷಯಿಕಮಿತಿ ಚತುರ್ಧಾ ಭಿದ್ಯತೇ । ಅಸ್ಮಿನ್ನರ್ಥೇ ದ್ವಿತೀಯಾವಿಭಕ್ತಿರ್ಭವತಿ ॥

ಉ ॥ ನಿರ್ವರ್ತ್ಯೇ—ಮನೆಯುಂ ಮಾಡಿದಂ. ವಿಕಾರ್ಯೇ—ಪಟುವಂ ಕಡಿದಂ. ಪ್ರಾಪ್ಯೇ—ಊರನೆಯ್ದಿದಂ. ವೈಷಯಿಕೇ—ನೇಸಱಂ ನೋಡಿದಂ.

ತಚ್ಚೇಪ್ಸಿತಮನೀಪ್ಸಿತಮಿತಿ ದ್ವಿಧಾ ಭವತಿ ॥

ಉ ॥ ಈಪ್ಸಿತೇ—ಕೂೞನಟ್ಟಂ, ಬಾಡಂ ಕೊಯ್ದಂ. ಅನೀಪ್ಸಿತೇ—ಹಾವಂ ದಾಂಟಿದಂ. ಕೊಳಡನೆ[5]ಡರ್ದಿದಂ.

ಟೀ ॥ ಆವುದು ಮಾಡಲ್ಪಡುವುದೋ ಅದು ಕರ್ಮಂ. ಕರ್ಮಣಿ=ಕರ್ಮಾರ್ಥದಲ್ಲಿ. ದ್ವಿತೀಯಾ=ದ್ವಿತೀಯಾವಿಭಕ್ತಿಯುಪ್ಪುದು. ಆ ಕರ್ಮಂ ನಿರ್ವರ್ತ್ಯವೆಂದುಂ ವಿಕಾರ್ಯವೆಂದುಂ ಪ್ರಾಪ್ಯವೆಂದುಂ ವೈಷಯಿಕವೆಂದುಂ ನಾಲ್ಕು ತೆಱನಕ್ಕುಂ. ಉ ॥ (ವೃ. ನೋ.) ಮತ್ತಮದು ಇಷ್ಟವೆಂದುಂ ಅನಿಷ್ಟವೆಂದುಂ ಇರ್ತೆಱನಕ್ಕುಂ. ಉ ॥ (ವೃ. ನೋ.)

## ಸೂ ॥ ಕಾಲಾಧ್ವನೋರವಿಚ್ಛೇದೇ ॥ 77 ॥

ವೃ ॥ ಕಾ[6]ಲೇ ಅಧ್ವನಿ ವಾ ಅವಿಚ್ಛೇದಃ ಕ್ರಿಯಾವ್ಯಾಪ್ತಿಃ ತತ್ರ ದ್ವಿತೀಯಾವಿಭಕ್ತಿರ್ಭವತಿ ॥

ಉ ॥ ಕಾಲೇ—ಬಂದು ಬರಿಸಮನಿರ್ದಂ, ಇರ್ತಿಂಗಳನೋದಿದಂ, ಅರೆಜಾವಮಂ ನಿದ್ರೆಗೆ[7]ಯ್ದಂ. ಅಧ್ವನಿ—ಬಿಗರ್ಾವುದಮಂ ಪರಿದಂ, ನಾಲ್ಗಾವುದಮಂ ನಡೆದಂ.

ಟೀ ॥ ಕಾಲಾಧ್ವನೋಃ=ಕಾಲದಲ್ಲಿ ಮೇಣ್ ಬಟ್ಟೆಯಲ್ಲಿ. ಅವಿಚ್ಛೇದೇ=ಕ್ರಿಯೆಯು ವ್ಯಾಪ್ತಿಯಾಗೆ ದ್ವಿತೀಯಾವಿಭಕ್ತಿಯಕ್ಕುಂ. ಉ ॥ (ವೃ. ನೋ.)

## ಸೂ ॥ ಕರ್ತೃಕರಣಯೋಸ್ತೃತೀಯಾ ॥ 78 ॥

ವೃ ॥ ಯಃ ಕ್ರಿ[8]ಯಾಂ ಕರೋತಿ ಸ ಕರ್ತಾ । ಸಾಧಕತಮಂ ಕರಣಂ । ತ[9]ಸ್ಮಿನ್ ಕರ್ತರಿ ಕರಣೇ ಚ ವಿ[10]ವಕ್ಷಿತೇ ತೃತೀಯಾವಿಭಕ್ತಿರ್ಭವತಿ ॥

ಉ ॥ ಕರ್ತರಿ—ದೇವದತ್ತನಿಂ ಮಾ[11]ಡಲ್ಪಟ್ಟುದು, ಯಜ್ಞಮಿ[12]ತ್ರನಿಂ ಪೇ[13]ಡಲ್ಪಟ್ಟುದು. ಕರಣೇ—ಕುಡುಗೋಲಿಂ ಕೊಯ್ದಂ, ಪರಶುವಿಂ ಕಡಿದಂ.

ಟೀ ॥ ಕರ್ತೃಕರಣಯೋಃ=ಕರ್ತೃಕರಣಾರ್ಥಂಗಳಲ್ಲಿ. ತೃತೀಯಾ=ತೃತೀಯಾ ವಿಭಕ್ತಿಯುಪ್ಪುದು. ಕರ್ತೃಕರಣಂಗಳಾವುವೆನೆ—ಮಾಡುವಾತಂ ಕರ್ತೃ, ಸಾಧಿಸುವುದು ಕರಣಂ. ಉ ॥ (ವೃ. ನೋ.)

---

1 ದ್ವಿತೀಯಾ ಕರ್ಮಣಿ. 2 ಯತ್ಕರ್ತ್ರಭಿಮತಂ ತತ್ಕರ್ಮ. 3 ತತ್ತು ಚತುರ್ವಿಧಂ. 4 ವಿಷಯಾಧಾರಕಮಿತಿ. 5 ನೆರಪಿದಂ. 6 ಕಾಲೇ ವಾ. 7 ಗೆಯ್ದು ಬಂದಂ. 8 ಒಂದು ಪ್ರತಿಯಲ್ಲಿ ಕ್ರಿಯಾಂ ಎಂಬುವಿಲ್ಲ. 9 ತಸ್ಮಿನ್ನರ್ಥೇ. 10 ಕಾರಕೇ. 11 ಕಾರ್ಯಂ ಮಾಡಿಸಲ್ಪಟ್ಟುದು. 12 ಪಶು. 13 ಮಂತ್ರಂ ಹೇಳಲ್ಪಟ್ಟುದು.

## ಸೂ ॥ ಹೇತಾವಪಿ ॥ 79 ॥

ವೃ ॥ ಹೇತುರ್ನಿಮಿತ್ತಂ । ತಸ್ಮಿನ್ನರ್ಥೇZಟ ತೃತೀಯಾವಿಭಕ್ತಿರ್ಭವತಿ ॥

ಉ ॥ ಓಲಗದಿಂದಿರ್ದಂ, ಓಲಗದಿಂ ಬಿಟ್ಟಂ.

ಟೀ ॥ ಹೇತಾವಪಿ = ಕಾರಣಾರ್ಥದೊಳಂ ತೃತೀಯಾವಿಭಕ್ತಿಯಕ್ಕುಂ. ಉ ॥ (ವೃ. ನೋ.)

## ಸೂ ॥ ಸಂಪ್ರದಾನೇ ಚತುರ್ಥೀ ॥ 80 ॥

ವೃ ॥ ಕರ್ಮಣೋ[1] ವಿಷಯಭೂತತ್ವೇನ ವಿವಕ್ಷಿತಂ ಸಂಪ್ರದಾನಂ । ತಸ್ಮಿನ್[2] ಚತುರ್ಥೀ ವಿಭಕ್ತಿರ್ಭವತಿ ॥

ಉ ॥ ಉಪಾಧ್ಯಾಯಂಗೆ ದಕ್ಷಿಣೆಯಂ ಕೊಟ್ಟಂ, ಬ್ರಾಹ್ಮಣಂಗೆ ಗೋವನಿತ್ತಂ.

ಟೀ ॥ ....ಕರ್ಮದೊಡನೆ ಕೂಡಿದುದು ಸಂಪ್ರದಾನವೆಂಬುದು. ಸಂಪ್ರದಾನೇ = ಆ ಸಂಪ್ರದಾನಕಾರಕದಲ್ಲಿ. ಚತುರ್ಥೀ = ಚತುರ್ಥೀವಿಭಕ್ತಿಯಕ್ಕುಂ. ಸಂಪ್ರದಾನವೆಂದು ಕೊಳ್ವ ಪಾತ್ರಂ. ಉ ॥ (ವೃ. ನೋ.)

## ಸೂ ॥ ರುಚಿಹಿತೇರ್ಷ್ಯಾಭಯೇಷು ಚ ॥ 81 ॥

ವೃ ॥ ರುಚೌ ಹಿತೇ ಈರ್ಷ್ಯಾಯಾಂ ಭಯೇ ಚ ಚತುರ್ಥೀವಿಭಕ್ತಿರ್ಭವತಿ ॥

ಉ ॥ ರುಚೌ—ದೇವದತ್ತಂಗೆ ರುಚಿಯಾಯ್ತು ಮೋದಕಂ. ಹಿತೇ—ಪಶುವಿಂಗೆ ಹಿತಂ ತೃಣಂ. ಈರ್ಷ್ಯಾಯಾಂ—ಆರ್ಯಂಗೆ ಸೇಸುಗುಂ ದುರ್ಜನಂ. ಭಯೇ—ಪಾಪಕ್ಕಂಜುಗುಂ ತಕ್ಕಂ.

ಟೀ ॥ ರುಚಿಹಿತೇರ್ಷ್ಯಾಭಯೇಷು ಚ = ರುಚಿಯಲ್ಲಿಯುಂ ಹಿತದಲ್ಲಿಯುಂ ಸೇಸಿನಲ್ಲಿಯುಂ ಭೀತಿಯಲ್ಲಿಯುಂ ಚತುರ್ಥೀವಿಭಕ್ತಿಯಕ್ಕುಂ. ಉ ॥ (ವೃ. ನೋ.)

## ಸೂ ॥ ಮನ್ಯಕರ್ಮಣಿ[3] ಚಾನಾದರೇ ॥ 82 ॥

ವೃ ॥ ಅನಾದರೇ ಗಮ್ಯಮಾನೇ ಮನ್ಯತೇಃ ಕರ್ಮಣಿ ಚ ಚತುರ್ಥೀವಿಭಕ್ತಿರ್ಭವತಿ ॥

ಉ ॥ ಅವನಂ ಪುಲ್ಗೆ ಕಷ್ಟಮಾಗೆ ಬಗೆದಂ, ಆತನ ಮಾತನೊಂದಡಕೆಗೆ ಕೊಳ್ಳಂ.

ಟೀ ॥ ಅನಾದರೇ = ಆದರಣೆಯಿಲ್ಲದಲ್ಲಿ. ಮನ್ಯಕರ್ಮಣಿ ಚ = ಬಗೆಧಾತುವಿನ ಕರ್ಮದಲ್ಲಿಯುಂ ಚತುರ್ಥೀವಿಭಕ್ತಿಯಕ್ಕುಂ. ಉ ॥ (ವೃ. ನೋ.)

## ಸೂ ॥ ನಮಸ್ಕ್ರಿಯಾಯಾಂ[4] ಸ್ವಸ್ತ್ಯಾದಿಷು ಚ ॥ 83 ॥

ವೃ ॥ ನಮಸ್ಕರಣೇ ಸ್ವಸ್ತ್ಯಾದಿಪ್ರಯೋಗೇ ಚ ಚತುರ್ಥೀವಿಭಕ್ತಿರ್ಭವತಿ ॥

---

1 ಕರ್ಮಕರಣಭೂತೇನೋಪಾತ್ತಮುಖ್ಯತ್ವೇನ ವಿವಕ್ಷಿತಂ. 2 ತಸ್ಮಿನ್ನರ್ಥೇ. 3 ಕರ್ಮಣ್ಯನಾದರೇ. 4 ನಮಸ್ಸ್ವಸ್ತ್ಯಾದಿಷು ಚ.

ಉ॥ ದೇವಂಗೆ ನಮಸ್ಕಾರಂಗೆಯ್ವಂ, ಅರಸಂಗೆಱಗಿದಂ; ಪ್ರಜೆಗೆಲ್ಲಂ ಸ್ವಸ್ತಿಯಕ್ಕೆ, ಭದ್ರಂ ಜಿನಶಾಸನಕ್ಕೆ.

ಆದಿಶಬ್ದಾತ್ ಸ್ವಾಹಾಸ್ವಧಾಲಂವ[1]ಷಡರ್ಥೇಷ್ವಪಿ ಚತುರ್ಥೀವಿಭಕ್ತಿರ್ಭವತಿ ॥

ಉ॥ ಅಗ್ನಿಗೆ ಸ್ವಾಹಾಕಾರಂ, ಪಿತೃಗಳ್ಗೆ ಸ್ವಧಾಕಾರಂ, ಮಲ್ಲಂಗೆ ಪ್ರತಿಮಲ್ಲನಲಂ (ಅಲಂ=ಸಮರ್ಥಂ), ಇಂದ್ರಂಗೆ ವಷಟ್ಕಾರಂ ಪ್ರಿಯಂ.

ಟೀ॥ ನಮಸ್ಕ್ರಿಯಾಯಾಂ=ನಮಸ್ಕಾರದಲ್ಲಿ. ಸ್ವಸ್ತ್ಯಾದಿಷು ಚ=ಸ್ವಸ್ತಿ ಎಂಬುದು ಮೊದಲಾದ ಶಬ್ದಂಗಳಲ್ಲಿಯುಂ ಚತುರ್ಥೀವಿಭಕ್ತಿಯಕ್ಕುಂ. ಉ॥ (ವೃ. ನೋ.)

ಸೂ ॥ ಅಪಾದಾನೇ ಪಂಚಮೀ ॥ 84 ॥

ವೃ॥ ಅಪಾದಾನಮ[2]ಪನಯನಂ । ತ[3]ಸ್ಮಿನ್ ವಿವಕ್ಷಿತೇ ಪಂಚಮೀವಿಭಕ್ತಿರ್ಭವತಿ ॥

ಉ॥ ಊರತ್ತಣಿಂ ಬಂದಂ, ಪಟದತ್ತಣಿಂದಿೞಿದಂ, ಕುದುರೆಯತ್ತಣಿಂದೋಡಿದಂ, ಪುಲಿಯತ್ತಣಿಂ ಭಯಂ.

ಟೀ ॥ ಅಪಾದಾನೇ=ಅಪಾದಾನಕಾರಕದಲ್ಲಿ. ಪಂಚಮೀ=ಪಂಚಮೀವಿಭಕ್ತಿಯಕ್ಕುಂ. ಉ॥ (ವೃ. ನೋ.)

ಸೂ ॥ ಸಂ[4]ಬಂಧೇ ಷಷ್ಠೀ ॥ 85 ॥

ವೃ॥ ಸ್ವ[5]ಸ್ವಾಮಿಭಾವಾದಿಸಂಬಂಧೇ ಷಷ್ಠೀವಿಭಕ್ತಿರ್ಭವತಿ॥

ಉ॥ ಸ್ವಸ್ವಾಮಿಭಾವೇ—ನಾಡೆಱೆಯಂ. ಅವಯವೇ—ಮರದ ಕೊಂಬು. ಜಾತೌ—ಪುಲ್ಲೆಯ ಪಿಂಡು. ವಸ್ತುನಿ—ಪೊನ್ನಗೆಜ್ಜೆ.

ಟೀ॥ ಸಂಬಂಧೇ=ಸ್ವಸ್ವಾಮಿಭಾವಂ ಮೊದಲಾದ ಸಂಬಂಧದಲ್ಲಿ. ಷಷ್ಠೀ=ಷಷ್ಠೀವಿಭಕ್ತಿಯಕ್ಕುಂ. ಉ॥ (ವೃ. ನೋ.)

ಸೂ ॥ ಅಧಿಕರಣೇ ಸಪ್ತಮೀ ॥ 86 ॥

ವೃ॥ ಆಧಾರೋಽಧಿಕರಣಂ । ತ[6]ಸ್ಮಿನ್ ಸಪ್ತಮೀವಿಭಕ್ತಿರ್ಭವತಿ॥

ಉ॥ ನೆಲದೊಳ್ ಪ[7]ಟ್ಟಂ, ತೊಱೆಯೊಳ್ ಬಿೞ್ದಂ, ಕೆಯ್ಯೊಳ್ ಕಂಕಣಂ, ಪೂವಿನೊಳ್ ಕಂಪು.

ಟೀ॥ ಅಧಿಕರಣೇ=ಅಧಿಕರಣಕಾರಕದಲ್ಲಿ. ಸಪ್ತಮೀ=ಸಪ್ತಮೀವಿಭಕ್ತಿಯಕ್ಕುಂ. ಅಧಿಕರಣಮೆಂಬೊಡೆ ಆಧಾರಂ. ಉ॥ (ವೃ. ನೋ.)

---

1 ವಷಡರ್ಥೇಷ್ವಪಿ ಚ. 2 ಮಪಾಯಃ. 3 ತಸ್ಮಿನ್ನರ್ಥೇ. 4 ಸ್ವಸ್ವಾಮಿಸಂಬಂಧೇ. 5 ಸ್ವಸ್ವಾಮಿಸಂಬಂಧೇ ಷಷ್ಠೀವಿಭಕ್ತಿರ್ಭವತಿ. ಅವಯವಜಾತಿವಸ್ತುಷು ಚ. 6 ತಸ್ಮಿನ್ನರ್ಥೇ. 7 ಪಟ್ಟಣಂ.

## ಸೂ ॥ ನಿರ್ಧಾರಣೇ ಚ ॥ 87 ॥

ವೃ ॥ ಜಾ[1]ತಿಕ್ರಿಯಾಗುಣದ್ರವ್ಯೈರೇಕದೇಶಪೃಥಕ್ಕರಣಂ ನಿರ್ಧಾರಣಂ। ತಸ್ಮಿನ್ ವಿವಕ್ಷಿತೇ ಚ ಸಪ್ತಮೀವಿಭಕ್ತಿರ್ಭವತಿ॥

ಉ॥ ಪುರುಷರೊಳ್ ಕ್ಷತ್ರಿಯಂ ಶೂರಂ, ನುಡಿವರೊಳ್ ಕಡುಜಾಣಂ, ಕಲಿಗಳೊಳ್ ಮೆಚ್ಚುಗಲಿ, ನರರೊಳುತ್ತಮಂ.

ಟೀ ॥ ನಿರ್ಧಾರಣೇ ಚ = ಜಾತಿ, ಕ್ರಿಯೆ, ಗುಣಂ, ದ್ರವ್ಯಂ, ಎಂಬಿವಱಿಂ ವಸ್ತುವಂ ಬೇರ್ಕೆಯ್ವುದು ನಿರ್ಧಾರಣಂ; ಆ ನಿರ್ಧಾರಣದಲ್ಲಿಯುಂ ಸಪ್ತಮೀವಿಭಕ್ತಿಯಕ್ಕುಂ. ಉ॥ (ವೃ. ನೋ.)

## ಸೂ ॥ ಆಸಾಂ ವ್ಯತ್ಯಯೋ ಬಹುಳಂ ॥ 88 ॥

ವೃ ॥ ಆಸಾಂ ವಿಭಕ್ತೀನಾಂ ಪ್ರಾಯೇಣ ವ್ಯತ್ಯಯೋ ವಿಪರ್ಯಾಸೋ ಭವತಿ ಉ[2]ತ್ತರತ್ರ ವಿವಕ್ಷಿತೇಽರ್ಥೇ॥

ಸ[3]ಪ್ತಮ್ಯರ್ಥೇ ಷಷ್ಠೀ —ಉ॥ ಚಾಗಿಗಳ ಬಲ್ಲಹಂ, ಅಂಕವಖ್ಖರ ದೇವಂ.

ಪಂಚಮ್ಯರ್ಥೇ ತೃತೀಯಾ—ಉ॥ ಬಱೆಯಿಂದುರ್ಚಿದಂ, ನೆಱೆಯಿಂ ಬದುರ್ಂಕಿದಂ, ಮನೆಯಿಂ ಪೋಱಮಟ್ಟಂ.

ಷಷ್ಠ್ಯರ್ಥೇ ಚತುರ್ಥೀ —ಉ॥ ನೆಲಕ್ಕೆಱೆಯುಂ, ಶ್ರೀಗಧೀಶ್ವರಂ.

ದ್ವಿತೀಯಾರ್ಥೇ ಚ[4] —ಉ॥ ಶಿ[5]ಷ್ಯಂಗೆ ಶಿಕ್ಷಿಸಿದಂ, ಬ[5]ಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ.

ಪ್ರ[6]ಥಮಾರ್ಥೇ ಷಷ್ಠೀ —ಉ॥ ನಿನ್ನ ಪೋಪುದುಂ ಬಿನ್ನನಿರ್ದಳ್, ನಿನ್ನ ಬರೆ ಮುರಮಥನ.

ತೃತೀಯಾರ್ಥೇ ಸಪ್ತಮೀ – ಉ॥ ಚಲದೊಳವನ ದೊರೆಯಾವಂ, ಕೊಡಲಿಯೊಳ್ ಕಡಿದಂ.

ಟೀ ॥ ಆಸಾಂ = ಈ ವಿಭಕ್ತಿಗಳ್ಗೆ. ಬಹುಳಂ = ವಿಕಲ್ಪದಿಂ. ಮುಂದೆ ಪೇೞ್ವರ್ಥಂಗಳಲ್ಲಿ, ವ್ಯತ್ಯಯಃ = ಪಲ್ಲಟಮಪ್ಪುದು.

ಸಪ್ತಮ್ಯರ್ಥೇ = ಸಪ್ತಮ್ಯರ್ಥದಲ್ಲಿ. ಷಷ್ಠೀ = ಷಷ್ಠೀವಿಭಕ್ತಿಯಕ್ಕುಂ.
ಉ॥ (ವೃ. ನೋ.)

ಪಂಚಮ್ಯರ್ಥೇ = ಪಂಚಮ್ಯರ್ಥದಲ್ಲಿ. ತೃತೀಯಾ = ತೃತೀಯಾವಿಭಕ್ತಿಯಕ್ಕುಂ.
ಉ॥ (ವೃ. ನೋ.)

---

1 ಕ್ರಿಯಯಾ ಗುಣೇನ ವಾ ಸಜಾತೀಯೇಷು ಯನ್ನಿರ್ಧಾರ್ಯತೇ ತನ್ನಿರ್ಧಾರಣಂ. ತತ್ರ ಷಷ್ಠೀಸಪ್ತಮ್ಯೌ ಭವತಃ. 2 ತಥಾ ಚ. 3 ಇದೂ ಇದರ ಮುಂದಣ ವಾಕ್ಯಗಳೂ ಒಂದು ಪ್ರತಿಯಲ್ಲಿ ಬೇರೆ ಬೇರೆ ಸೂತ್ರಗಳಾಗಿವೆ. 4 ಚತುರ್ಥೀ. 5 ಈ ಉದಾಹರಣೆಗಳು ಒಂದು ಪ್ರತಿಯಲ್ಲಿಲ್ಲ. ಅದರಲ್ಲಿ ನೆಲಕ್ಕೆ ಪ್ರಭು, ನೆಲಕ್ಕೆ ಮಂದಂ ಎಂದಿದೆ. ಬಹುಳಕ್ಕೆ—ಪಂಪರಾಮಾಯಣ 7—98. 6 ಇದಕ್ಕೆ ಹಿಂದೆ, ದ್ವಿತೀಯಾರ್ಥೇ ಷಷ್ಠೀ—ಅರಸನ ಕಂಪಂ, ಎಂದು ಒಂದು ಪ್ರತಿಯಲ್ಲಿ ಮಾತ್ರ ಇದೆ.

ಷಷ್ಠ್ಯರ್ಥೇ=ಷಷ್ಠೀವಿಭಕ್ತ್ಯರ್ಥದಲ್ಲಿ. ಚತುರ್ಥೀ=ಚತುರ್ಥೀವಿಭಕ್ತಿಯಕ್ಕುಂ. ಉ॥ (ವೃ. ನೋ.)

ದ್ವಿತೀಯಾರ್ಥೇ ಚ=ದ್ವಿತೀಯಾರ್ಥದಲ್ಲಿಯುಂ ಚತುರ್ಥೀವಿಭಕ್ತಿಯಕ್ಕುಂ. ಉ॥ ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆ. ಮತ್ಸ್ಯಾವತಾರಮಂ ಎಂಬುದರ್ಥಂ. ಮತ್ಸ್ಯಾವತಾರಮಂ ಪಡೆದನೆಂಬಲ್ಲಿ ಮತ್ಸ್ಯಾವತಾರಕ್ಕೆ ಎಂದಂ.

ಪ್ರಥಮಾರ್ಥೇ=ಪ್ರಥಮಾವಿಭಕ್ತ್ಯರ್ಥದಲ್ಲಿ. ಷಷ್ಠೀ=ಷಷ್ಠೀವಿಭಕ್ತಿಯಕ್ಕುಂ. ಉ॥ (ವೃ. ನೋ.)

ತೃತೀಯಾರ್ಥೇ=ತೃತೀಯಾರ್ಥದಲ್ಲಿ. ಸಪ್ತಮೀ=ಸಪ್ತಮೀವಿಭಕ್ತಿಯಕ್ಕುಂ. ಉ॥ (ವೃ. ನೋ.)

## ಸೂ ॥ ಜಾತಿರೇಕವದ್ಬ[1]ಹ್ವಾಖ್ಯಾಯಾಂ ಬ[2]ಹುಳಂ ॥ 89 ॥

ವೃ ॥ ಜಾತಿವಾ[3]ಚೀ ಶಬ್ದಃ ಬಹ್ವಾಖ್ಯಾನೇ ಏಕವದ್ಬಹುಳಂ ಭವತಿ ॥

ಉ॥ ಕರಿಯಿವು, ಕರಿಗಳಿವು; ಕೆಯ್ ಬೆಳೆದುವು, ಕೆಯ್ಗಳ್ ಬೆಳೆದುವು.[4]

ಟೀ ॥ ಜಾತಿಃ=ಜಾತಿಯಂ ಪೇೞ್ವ ಶಬ್ದಂ. ಬಹ್ವಾಖ್ಯಾಯಾಂ=ಬಹುತ್ವಮಂ ನುಡಿವಲ್ಲಿ. ಬಹುಳಂ=ವಿಕಲ್ಪದಿಂ. ಏಕವತ್=ಏಕವಚನಮಾಗಿರ್ಪುದು. ಉ॥ (ವೃ. ನೋ.)

## ಸೂ ॥ ಸಂಖ್ಯೇಯೇ ಸಂಖ್ಯಾಸು ಚ ॥ 90 ॥

ವೃ ॥ ಸಂಖ್ಯೇಯೇ ಸಂಖ್ಯಾಸ್ವಪಿ ವರ್ತಮಾನಃ ಶಬ್ದಃ ಬಹ್ವಾಖ್ಯಾಯಾಮೇ[5]ಕವದ್ಭವತಿ ॥

ಉ॥ ಪತ್ತು ದೆಸೆ, ಪತ್ತು ದೆಸೆಗಳ್; ಮೂಱು ನಾಲ್ಕು, ಮೂಱು ನಾಲ್ಕುಗಳ್.

ಬಹುಳಗ್ರಹಣಾತ್ ಕ್ವಚಿನ್ನ ಭವತಿ—ಪದಿನಯ್ವರ್.

ಟೀ ॥ ಸಂಖ್ಯೇಯೇ=ಸಂಖ್ಯಾವಸ್ತುವಿನಲ್ಲಿ. ಸಂಖ್ಯಾಸು ಚ=ಸಂಖ್ಯೆಗಳಲ್ಲಿಯುಂ ಬಹುಳದಿಂ ಬಹುವಚನಮೇಕವಚನರೂಪಮಕ್ಕುಂ. ಉ॥ (ವೃ. ನೋ.)

## ಸೂ ॥ ಭಾವವಚನೇಽಪಿ ॥ 91 ॥

ವೃ ॥ ಭಾವಾಖ್ಯಾಯಾಂ[6] ವರ್ತಮಾನೋ ಯಃ ಶಬ್ದಃ ಸೋಽಪ್ಯೇಕವದ್ಭವತಿ ॥

ಉ॥ ಕರ್ಪು, ಬೆಳ್ಪು, ತಣ್ಪು, ತಿಣ್ಪು, ಕೂರ್ಮೆ, ಪೆರ್ಮೆ.

---

1 ಬಹುತ್ವಾಖ್ಯಾನೇ. 2 ಬಹುಳಂ ಎಂಬುದು ಕೆಲವು ಪ್ರತಿಗಳಲ್ಲಿ ಇಲ್ಲ. 3 ವಾಚಕಃ. 4 ಇದಾದ ಮೇಲೆ—ಬಹುಳ ಗ್ರಹಣಾತ್ (ಬಹುಳಾಧಿಕಾರಾತ್) ಸ್ತ್ರೀಪುರುಷ ವಿಷಯೇ ಕ್ವಚಿನ್ನ ಭವತಿ—ಎಂದು ಎರಡು ಪ್ರತಿಗಳಲ್ಲಿ ಇದೆ. 5 ಏಕ ವದ್ಭವತಿ. 6 ಭಾವಮುಖೆ.

ಬಹುಳಾಧಿಕಾರಾತ್ ಪೆಳ್ಪುಗಳ್, ತೆಳ್ಪುಗಳ್, ಇತಿ ಭವತಿ॥

ಟೀ॥ ಭಾವವಚನೇZಪಿ—ಭಾವವಚನದಲ್ಲಿಯುಂ ಬಹುವಚನಂ ವಿಕಲ್ಪದಿಂದೇಕವಚನರೂಪಮಕ್ಕುಂ. ಉ॥ (ವೃ. ನೋ.) ವಿಕಲ್ಪಮೆಂತೆನೆ—ಪೆಳ್ಪುಗಳ್, ಕರ್ಪುಗಳ್, ಕೂರ್ಮೆಗಳ್, ಪೆರ್ಮೆಗಳ್.

ಇತಿ ಕರ್ಣಾಟಕವ್ಯಾಕರಣವಿವರಣೇ ಕಾರಕವಿಧಾನಂ ನಾಮ

ಚತುರ್ಥಃ ಪರಿಚ್ಛೇದಃ.

# 5. ಯು[1]ಷ್ಮದಾದಿವಿಧಾನಂ.

---

**ಸೂ ॥ ನೀನ್ಆನ್ತಾನಃ ಪ್ರಥಮಾವಿಭಕ್ತೌ ನಿ[2]ೞೆೞ್ತೞಾಂ ॥ 92 ॥**

ವೃ ॥ ಯುಷ್ಮದಸ್ಮದನ್ಯದರ್ಥೇ ವರ್ತಮಾನಾನಾಂ ನಿೞ್ ಎೞ್ ತೞ್ ಇತ್ಯೇತೇಷಾಂ ಪ್ರಥಮಾವಿಭಕ್ತೌ ಪರತಃ ನೀನ್ ಆನ್ ತಾನ್ ಇತ್ಯೇತಾನಿ ರೂಪಾಣಿ ಯ[3]ಥಾಕ್ರಮಂ ಭವಂತಿ ॥

ಉ ॥ ನೀನಿರ್ದಯ್, ಆಂ ಪೋದೆಂ, ತಾಂ ಬಂದಂ.

ಟೀ ॥ ನಿೞೆೞ್ತೞಾಂ = ನಿೞ್ ಎೞ್ ತೞ್ ಎಂಬಿವರ್ಕೆ. ಪ್ರಥಮಾವಿಭಕ್ತೌ = ಪ್ರಥಮಾ ವಿಭಕ್ತಿ ಪರಮಾಗುತ್ತಿರೆ. ನೀನ್ಆನ್ತಾನಃ = ಯಥಾಕ್ರಮದಿಂ ನೀನ್ ಆನ್ ತಾನ್ ಎಂಬ ಆದೇಶಂಗಳಪ್ಪುವು. ಉ ॥ (ವೃ. ನೋ.)

**ಸೂ ॥ ನಿನಎನತನಾಶ್ಚ[4]ತುರ್ಥ್ಯಾಂ ತೃತೀಯತ್ವಂಚಾಸ್ಯಾಃ ॥ 93 ॥**

ವೃ ॥ ನಿೞ್ ಎೞ್ ತೞ್ ಇತ್ಯೇತೇಷಾಂ ಪುನಃ ಚತುರ್ಥೀವಿಭಕ್ತೌ ಪರತಃ ಯಥಾಸಂಖ್ಯಂ ನಿನ ಎನ ತನ ಇತ್ಯೇತೇ ಆದೇಶಾ ಭವಂತಿ। ಅಸ್ಯಾಶ್ಚತುರ್ಥ್ಯಾ ಅಪಿ ತೃತೀಯತ್ವಂ ಭವತಿ ॥

ಉ ॥ ನಿನಗೆ, ಎನಗೆ, ತನಗೆ.

ಟೀ ॥ ಆ ನಿೞ್ ಎೞ್ ತೞ್ ಎಂಬಿವರ್ಕೆ, ಚತುರ್ಥ್ಯಾಂ = ಮತ್ತೆ ಚತುರ್ಥೀವಿಭಕ್ತಿ ಪರಮಾಗುತ್ತಿರೆ. ನಿನ ಎನ ತನಾಃ = ಯಥಾಕ್ರಮದಿಂ ನಿನ ಎನ ತನ ಎಂಬಾದೇಶಂಗಳಪ್ಪುವು. ಅಸ್ಯಾಃ = ಆ ಚತುರ್ಥೀವಿಭಕ್ತಿಗೆ. ತೃತೀಯತ್ವಂ ಚ = ತನ್ನ ವರ್ಗದ ತೃತೀಯಾಕ್ಷರಂ ಗತ್ವಮುಮಕ್ಕುಂ. ಉ ॥ (ವೃ. ನೋ.)

**ಸೂ ॥ ದ್ವಿ[5]ಬಹ್ವೋರ್ನಸ್ಯ ಮಃ ॥ 94 ॥**

ವೃ ॥ ದ್ವಿತ್ವಬಹುತ್ವಯೋರ್ವಿಷಯೇ ವಿವಕ್ಷಿತೇ ನಕಾರಸ್ಯ ಸ್ಥಾನೇ ಮಕಾರೋ ಭವತಿ ॥

ಉ ॥ ನೀಮುಂ, ಆಮುಂ, ತಾಮುಂ ; ನಿಮಗೆ, ಎಮಗೆ, ತಮಗೆ ; ನಿಮ್ಮ, ಎಮ್ಮ, ತಮ್ಮ ; ನಿಮ್ಮೊಳ್, ಎಮ್ಮೊಳ್, ತಮ್ಮೊಳ್.

ಟೀ ॥ ದ್ವಿಬಹ್ವೋಃ = ಆ ಶಬ್ದಂಗ[6]ಳ್ಗೆ ದ್ವಿತ್ವಬಹುತ್ವಂಗಳಂ ನುಡಿಯಲ್ವೇಡಿದೊಡೆ. ನಸ್ಯ = ನಕಾರಕ್ಕೆ. ಮಃ = ಮಕಾರಮಕ್ಕುಂ. ಉ ॥ (ವೃ. ನೋ.)

---

1 ಯುಷ್ಮದಸ್ಮತ್ಪ್ರಕರಣಂ, ಶಬ್ದರೀತಿವಿಧಾನಂ. 2 ನಿನ್ನೆನ್ನತನ್ನಾನಾಂ. 3 ಕ್ರಮೇಣ. 4 ಚತುರ್ಥ್ಯಾಸ್ತೃತೀಯತ್ವಂ. 5 ದ್ವಿತ್ವಬಹುತ್ವಯೋಃ. 6 ಗಳ್.

## ಸೂ ॥ ಅ[1]ದು ಇದು ಉದೂನಾವಂತೇ ವತೌ ಪುಂಸಿ ॥ 95 ॥

ವೃ ॥ ಅದು ಇದು ಉದು ಇತ್ಯೇತೇಷಾಂ ಪ್ರಕೃತಿವಿಶೇಷಾಣಾಂ ಪುಲ್ಲಿಂಗವಿವಕ್ಷಾಯಾಂ ಸರ್ವಾಸು ವಿಭಕ್ತಿಷು ಪರಭೂತಾಸು ಅಂತೇ ವಕಾರತಕಾರೌ ಭವತಃ ॥

ಉ ॥ ಅವಂ, ಇವಂ, ಉವಂ; ಆತಂ, ಈತಂ, ಊತಂ. ಸ್ವಾ[2]ರಾದೌನಾಗಮಃ ಪುಂಸಿ (50)—ಅವನಂ, ಇವನಂ, ಉವನಂ; ಆತನಂ, ಈತನಂ, ಊತನಂ. ಏವಂ ಸರ್ವತ್ರ.

ಟೀ ॥ ಅದು ಇದು ಉದೂನಾಂ=ಅದು ಇದು ಉದು ಎಂಬಿವರ್ಕೆ. ಪುಂಸಿ=ಪುಲ್ಲಿಂಗವುಂ ನುಡಿಯಲ್ವೇಡಿದೊಡೆ. ಎಲ್ಲಾ ವಿಭಕ್ತಿಗಳ ಪರವಾಗೆಯುಂ, ಅಂತೇ=ಆ ಶಬ್ದಂಗಳ ಅಂತ್ಯದ ಉಕಾರಸ್ಥಾನದಲ್ಲಿ. ವತೌ=ವಕಾರತಕಾರಂಗಳ್ ಆದೇಶವುಕ್ಕುಂ.

ಉ ॥ (ವೃ. ನೋ.) ಇಂತಿವರ್ಕೆ ಸಪ್ತವಿಭಕ್ತಿಗಳಂ ಪತ್ತಿಸುವುದು.

ಪ್ರಯೋಗಂ—

ಆತಂ ದ್ರೋಣಂ ನೆಗೞ್ದಂ ।
ಈತಂ ಕುರುರಾಯನೂತನಶ್ವತ್ಥಾಮಂ ॥

## ಸೂ ॥ ವಳ್ ಕೇ ಚ ಸ್ತ್ರಿಯಾಂ ॥ 96 ॥

ವೃ ॥ ತೇಷಾಂ ಅದು ಇದು ಉದೂನಾಂ ಸ್ತ್ರೀವಿವಕ್ಷಾಯಾಂ ಸರ್ವಾಸು ವಿಭಕ್ತಿಷು ಪರಭೂತಾಸು ಅಂ[3]ತೇ ವಳ್, ಕೇ, ಇತ್ಯೇತೌ ಭವತಃ ॥

ಉ ॥ ಅವಳ್, ಇವಳ್, ಉವಳ್; ಅವಳಂ, ಇವಳಂ, ಉವಳಂ; ಆಕೆ, ಈಕೆ, ಊಕೆ; ಆಕೆಯುಂ, ಈಕೆಯುಂ, ಊಕೆಯುಂ.

ಟೀ ॥ ಅದು ಇದು ಉದು ಎಂಬಿವರ್ಕೆ, ಸ್ತ್ರಿಯಾಂ=ಸ್ತ್ರೀಲಿಂಗದಲ್ಲಿ. ಎಲ್ಲಾ ವಿಭಕ್ತಿಗಳ್ ಪರವಾಗೆಯುಂ ಆಶಬ್ದಂಗಳ ಅಂತ್ಯದ ಉಕಾರಕ್ಕೆ. ವಳ್ ಕೇ ಚ=ವಳ್, ಕೇ, ಎಂಬೆರಡುಮಾದೇಶಮುಕ್ಕುಂ.

ಉ ॥ (ವೃ. ನೋ.) ಇಂತಿವರ್ಕೆ ಎಲ್ಲಾ ವಿಭಕ್ತಿಗಳಂ ಪತ್ತಿಸುವುದು.

## ಸೂ ॥ ದೀ[4]ರ್ಘಸ್ತಕಯೋಃ ॥ 97 ॥

ವೃ ॥ ತೇಷಾಮುದುಪ್ರಭೃತೀನಾಂ ತ[5]ಕಯೋಃ ಪರಯೋಃ ಪೂರ್ವಸ್ವರಸ್ಯ ದೀರ್ಘಾದೇಶೋ ಭವತಿ ॥

ಪೂರ್ವೋಕ್ತಾನಿ ಉದಾಹರಣಾನಿ.

---

1 ಅದ್ವಿದುದೂನಾಂ. 2 ಈ ಸೂತ್ರವು ಒಂದು ಪ್ರತಿಯಲ್ಲಿ ಮಾತ್ರ ಇದೆ. 3 ಅಂತ್ಯಸ್ಯ. 4 ದೀರ್ಘಃ ಠೇಕಯೋಃ. 5 ಠೇಕಯೋಃ.

ಟೀ ॥ ಆ ಅದುಮೊದಲಾದ ಶಬ್ದಂಗಳ್ಗೆ ಪುಲ್ಲಿಂಗಸ್ತ್ರೀಲಿಂಗಂಗಳಲ್ಲಿ. ತಕಯೋಃ=ಅದುಇದು ಉದೂನಾಮಂತೇ ವತೌ ಪುಂಸಿ (95) ಎಂಬ ಸೂತ್ರದಿಂದಾದ ತಕಾರಮುಂ ವಳ್ ಕೇ ಚ ಸ್ತ್ರಿಯಾಂ (96) ಎಂಬ ಸೂತ್ರದಿಂದಾದ ಕೇಕಾರಮುಂ ಪರಮಾಗೆ. ಪೂರ್ವಸ್ವರಕ್ಕೆ, ದೀರ್ಘಃ=ದೀರ್ಘಮಕ್ಕುಂ.

ಅದಂ ಮುಂಪೇಳ್ದುದಾಹರಣಂಗಳಿಂ ನೋಡಿಕೊಳ್ವುದು.

ಮತ್ತಮನ್ಯವ್ಯಾಕರಣಸೂತ್ರದೊಳಮಿಂತೆಂಬುದು—

ಅ[1]ವನಾತನೆಂಬ ಮಾತುಗ ।
ಳವು ಪುಲ್ಲಿಂಗಪ್ರಯೋಗದೊಳ್ ಸ್ತ್ರೈಣದೊಳ್ ॥
ನ್ನವಳಾಕೆಯೆಂಬ ನುಡಿ ಸಂ ।
ಭವಿಕುಂ ಶೇಷದೊಳದೆಂಬ ಮಾತಸೆದಿರ್ಕುಂ ॥

ಸೂ ॥ ಸ್ತ್ರೀಪುಂಸಯೋರ್ವ್ಯತ್ಯಾಸಃ ಕ್ವಚಿತ್ ॥ 98 ॥

ವೃ ॥ ಸ್ತ್ರೀಲಿಂಗಪುಲ್ಲಿಂಗಯೋಃ ಕ್ವಚಿತ್ಕರುಣಾಭಿಲಾಷಾದೌ ವ್ಯತ್ಯಾಸೋ ವಿಪರ್ಯಾಸೋ ಭವತಿ ॥

ಉ ॥ ಕರುಣಂ, ಅಭಿಲಾಷೆ, ಉಪತ್ಯಕಂ.

ಟೀ ॥ ಸ್ತ್ರೀಪುಂಸಯೋಃ=ಸ್ತ್ರೀಲಿಂಗಪುಲ್ಲಿಂಗಂಗಳಲ್ಲಿ. ಕ್ವಚಿತ್=ಕರುಣಾ, ಅಭಿಲಾಷ, ಎಂಬಿವು ಮೊದಲಾದ ಕೆಲವು ಠಾವಿನಲ್ಲಿ. ವ್ಯತ್ಯಾಸಃ=ಪಲ್ಲಟವಪ್ಪುದು.

ಉ ॥ (ವೃ. ನೋ.)

ಸೂ ॥ ನಿತ್ಯಂ ಕಳತ್ರಾದೌ ನಪುಂಸಕತ್ವಂ ॥ 99 ॥

ವೃ ॥ ಕಳತ್ರಪ್ರಭೃತಿಷು ಶಬ್ದೇಷು ನಿತ್ಯಂ ನ[2]ಪುಂಸಕತ್ವಮೇವ ಭವತಿ ॥

ಉ ॥ ಇ[3]ದು ಧರ್ಮಕಳತ್ರಂ, ಇದು ಅಪತ್ಯಂ, ಇದು ಕೂಸು.

ಟೀ ॥ ಕಳತ್ರಾದೌ=ಕಳತ್ರಂ ಮೊದಲಾದ ಶಬ್ದಂಗಳಲ್ಲಿ. ನಿತ್ಯಂ=ನಿತ್ಯಮಾಗಿ. ನಪುಂಸಕತ್ವಂ=ನಪುಂಸಕಲಿಂಗಮೆ ಅಕ್ಕುಂ. ಉ ॥ (ವೃ. ನೋ.)

ಸೂ ॥ ಆತೋ ಲಘುರೇತ್ ॥ 100 ॥

ವೃ ॥ ಲಿಂಗಾಂತಸ್ಯ ಆಕಾರಸ್ಯ ವಿಭಕ್ತಿಷು ಪರಭೂತಾಸು ಲಘುಭೂತಃ ಏಕಾರೋ ಭವತಿ ॥

ಉ ॥ ವಸುಧೆ, ವನಿತೆ, ದಯೆ, ಚಂದ್ರಿಕೆ, ಮಾಲೆ, ಶಾಲೆ, ಧಾರೆ, ದ್ರಾಕ್ಷೆ, ಇತ್ಯಾದಿ.

ಟೀ ॥ ಆತಃ=ಲಿಂಗಾಂತದ ಆಕಾರಕ್ಕೆ ವಿಭಕ್ತಿಗಣಂ ಪರಮಾಗೆ. ಲಘುಃ=ಲಘುವಪ್ಪ. ಏತ್=ಏಕಾರಮಕ್ಕುಂ. ಉ ॥ (ವೃ. ನೋ.)

1 ಕಾವ್ಯಾವಲೋಕನ, ಸೂತ್ರ 37. 2 ನಪುಂಸಕಲಿಂಗತಾ ಭವತಿ. 3 ಇದು ಕಳತ್ರಂ.

## ಸೂ ॥ ಈದೂತೋರ್ಹ್ರಸ್ವಃ ॥ 101 ॥

ವೃ ॥ ಲಿಂ[1]ಗಾಂತಗತಯೋಃ ಈಕಾರೋಕಾರಯೋಃ ಹ್ರಸ್ವೋ ಭವತಿ ॥

ಉ ॥ ಲಕ್ಷ್ಮಿ, ನದಿ, ನಾರಿ, ಸರಸ್ವತಿ ; ಸರಯು, ಕುಹು, ವಧು, ವಾಮೋರು.

ಟೀ ॥ ಈದೂತೋಃ=ಲಿಂಗಾಂತದ ಈಕಾರೋಕಾರಂಗಳ್ಗೆ. ಹ್ರಸ್ವಃ=ಹ್ರಸ್ವಮಕ್ಕುಂ. ಉ ॥ (ವೃ. ನೋ.)

ಅನ್ಯಪ್ರಯೋಗಂ—

ಲಲಿತಾಳಿಕೆ ತಿಲನಾಸಿಕೆ ।
ಲಲಿತಾಂಗಿ ವಿಶಾಲಜಘನೆ ಚಂದ್ರಾಸ್ಯೆ ಸಮು ॥
ಜ್ವಲಿತರದೆ ಮನಸಿಜಂ ಕಡು ।
ಗಲಿಯಾದಂ ನಿನ್ನ ಯುವ್ವನಂ ಪೆರ್ಚಲೊಡಂ ॥

## ಸೂ ॥ ನೈಕಾಕ್ಷರಪದೇ ॥ 102 ॥

ವೃ ॥ ಏ[2]ಕಾಕ್ಷರಂ ಯತ್ಪದಂ ತ[3]ಸ್ಮಿನ್ ಈಕಾರೋಕಾರಯೋಃ ಹ್ರಸ್ವೋ ನ ಭವತಿ ॥

ಉ ॥ ಶ್ರೀ, ಸ್ತ್ರೀ, ಭೂ, ಭ್ರೂ.

ಟೀ ॥ ಏಕಾಕ್ಷರಪದೇ=ಏಕಾಕ್ಷರಪದಮಾದಲ್ಲಿ. ಈ[4]ಕಾರೋಕಾರಂಗಳ್ಗೆ ಹ್ರಸ್ವಂ, ನ=ಆಗದು.

ಉ ॥ (ವೃ. ನೋ.)

ಅನ್ಯವ್ಯಾಕರಣಸೂತ್ರಂ—

ಆ[5]ಕಾರಕ್ಕೆ ಲಘೂಕೃತ ।
ಮೇಕಾರಂ ತಾನದಕ್ಕು ವಿಾದೂದಂತ ॥
ಕ್ಕೇಕಾಕ್ಷರಪದಮುೞಿಯೆ ನಿ[6] ।
ರಾಕುಳದಿಂ ಹ್ರಸ್ವಮಕ್ಕುಮೆಲ್ಲೆಡೆಗಳೊಳಂ ॥

## ಸೂ ॥ ಧಾತೋಸ್ತೃಶಬ್ದಸ್ಯ ವಾರಃ ॥ 103 ॥

ವೃ ॥ ಧಾ[7]ತೋರ್ವಿಹಿತಸ್ಯ ತೃಶಬ್ದಸ್ಯ ವಾ ಆರಾದೇಶೋ ಭವತಿ ॥

ಉ ॥ ಕರ್ತಾರಂ, ಕರ್ತೃ ; ಧಾತಾರಂ, ಧಾತೃ ; ಭರ್ತಾರಂ, ಭರ್ತೃ ; ದಾತಾರಂ ದಾತೃ ; ಹೋತಾರಂ, ಹೋತೃ.

ಟೀ ॥ ಧಾತೋಃ=ಧಾತುವಿನ. ತೃಶಬ್ದಸ್ಯ=ತೃಶಬ್ದಕ್ಕೆ. ವಾ=ವಿಕಲ್ಪದಿಂ ಆರಃ=ಆರಾದೇಶಮಕ್ಕುಂ. ಉ ॥ (ವೃ. ನೋ.)

---

1 ಲಿಂಗಾಂತಯೋಃ. 2 ಏಕಾಕ್ಷರಪದಾಂತಾನಾಮಾಕಾರ ಈಕಾರ ಊಕಾರ ವಿಶೇಷಾಂ ಹ್ರಸ್ವಾ ನ ಭವಂತಿ. 3 ತಸ್ಮಿನ್ನೀಕಾರಾಕಾರೋಕಾರಾಃ ಹ್ರಸ್ವಾ ನ ಭವಂತಿ. 4 ಆಕಾರ ಈಕಾರ ಊಕಾರಂಗಳ್ಗೆ. 5 ಕಾವ್ಯಾವಲೋಕನ, ಸೂತ್ರ 89. 6 ನಿರಾಕೃತದಿಂ. 7 ಧಾತುವಿಹಿತತೃಶಬ್ದಸ್ಯಂತ್ಯಸ್ಯ.

### ಸೂ ॥ ರಾಂತೋ ವೇಧಸಿ ವಿಧಾತುಃ ॥ 104 ॥

ವೃ ॥ ವಿ[1]ಧಾತೃಶಬ್ದಸ್ಯ ವೇ[2]ಧಸ್ಯಭಿಧೇಯೇ ರಾಂತೋ ವಾ ಭವತಿ ॥

ಉ ॥ ವಿಧಾತ್ರಂ, ವಿಧಾತೃ.

ಟೀ ॥ ವಿಧಾತುಃ=ವಿಧಾತೃಶಬ್ದಕ್ಕೆ. ವೇಧಸಿ=ಬ್ರಹ್ಮನಂ ನುಡಿವ ಅರ್ಥವಾಗೆ ರಾಂತಃ=ರಕಾರಾಂತತೆ ವಿಕಲ್ಪದಿಂದಕ್ಕುಂ. ಉ ॥ (ವೃ. ನೋ.)

### ಸೂ ॥ ಅರೋಽನ್ಯತ್ರ[3] ॥ 105 ॥

ವೃ ॥ ಕ್ರಿಯಾವಾಚಿನೋ ಧಾತೋರನ್ಯತ್ರ ವರ್ತಮಾನಸ್ಯ ತೃಶಬ್ದಸ್ಯ ಅರೋ ಭವತಿ ॥

ಉ ॥ ಪಿತರಂ, ಪಿತೃ ; ಭ್ರಾತರಂ, ಭ್ರಾತೃ ; ಇತ್ಯಾದಿ.

ಟೀ ॥ ಅನ್ಯತ್ರ=ಧಾತುವಿನದಲ್ಲದ ತೃಶಬ್ದಕ್ಕೆ. ಅರಃ=ಅರಾದೇಶಮಕ್ಕುಂ. ಉ ॥ (ವೃ. ನೋ.)

### ಸೂ ॥ ಶ್ವಯುವಾಧ್ವನಾಮಾನಃ ॥ 106 ॥

ವೃ ॥ ಶ್ವನ್ ಯುವನ್ ಅಧ್ವನ್ ಇತ್ಯೇತೇಷಾಮಂತಸ್ಯ ಆನೋ ಭವತಿ ॥

ಉ ॥ ಶ್ವಾನಂ, ಯುವಾನಂ, ಅಧ್ವಾನಂ.

ಟೀ ॥ ಶ್ವಯುವಾಧ್ವನಾಂ=ಶ್ವನ್ ಯುವನ್ ಅಧ್ವನ್ ಎಂಬಿವಱಂತಕ್ಕೆ. ಆನಃ=ಆನಪ್ರತ್ಯಯಮಕ್ಕುಂ. ಉ ॥ (ವೃ. ನೋ.)

### ಸೂ ॥ ಸಖ್ಯುರಾಯಃ ॥ 107 ॥

ವೃ ॥ ಸ[4]ಖಿಶಬ್ದಾಂತಸ್ಯ ಆಯಪ್ರತ್ಯಯೋಭವತಿ ॥

ಉ ॥ ಸಖಾಯಂ.

ಟೀ ॥ ಸಖ್ಯುಃ=ಸಖಿಶಬ್ದಕ್ಕೆ ವಿಭಕ್ತಿಗಣಂ ಪರಮಾಗೆ. ಆಯಃ=ಆಯಪ್ರತ್ಯಯಮಕ್ಕುಂ. ಉ ॥ (ವೃ. ನೋ.)

### ಸೂ ॥ ವಸ್ಸಯಸ್ಸೋರುಪಾಂತ್ಯಸ್ಯ ದೀರ್ಘೋ ವಾ[5] ॥ 108 ॥

ವೃ ॥ ವಸ್ಸಯಸ್ಸಪ್ರತ್ಯಯಾಂತಯೋರುಪಾಂತ್ಯಸ್ಯ ದೀ[6]ರ್ಘೋ ವಾ ಭವತಿ ॥

ಉತ್ತರತ್ರ ಉದಾಹ್ರಿಯೇತೇ.

---

1 ವೇಧಸಿ ಅಭಿಹಿತೇ ವಿಧಾತೃಶಬ್ದಸ್ಯ ರಾಂತೋ ವಾ ಭವತಿ. 2 ವೇಧಸ್ಯರ್ಥೇ. 3 ಈ ಸೂತ್ರಪಾದವೇಲೆ ಹಿಂದೆ ಅಚ್ಚಾಗಿರುವ ಪುಸ್ತಕದಲ್ಲಿ—ತಕ್ತ—ಎಂಬ ಸೂತ್ರವಿದೆ. ಆದರೆ ಈ ಸೂತ್ರವು ಈಗ ದೊರೆತಿರುವ 5 ಓಲೆಯ ಪ್ರತಿಗಳಲ್ಲಿಯೂ ಇಲ್ಲ. 4 ಸಖಿಶಬ್ದಸ್ಯ ವಿಭಕ್ತ್ಯಾಸು ಪರಭೂತಾಸು ಅಂತ್ಯಸ್ಯ ಆಯೋ ಭವತಿ. 5 ವಾ ಲೋಪಃ. 6 ದೀರ್ಘೋ ಭವತಿ । ವಿಕಲ್ಪೇನ ಶ್ಯಚಿತಸ್ಥ್ಯಃ, ದೀರ್ಘೋ ವಾ ಭವತಿ । ಕೃತಿತಂಕಸ್ಯ ಲೋಪಃ.

ಟೀ ॥ ವಸ್ಸ ಯಸ್ನೋಃ=ವಸ್ಸ ಯಸ್ಸ ಪ್ರತ್ಯಯಾಂತಂಗಳ. ಉಪಾಂತ್ಯಸ್ಯ=ಉಪಾಂತ್ಯಕ್ಕೆ. ವಾ=ವಿಕಲ್ಪದಿಂ. ದೀರ್ಘಃ=ದೀರ್ಘಮಕ್ಕುಂ.

ಇದರ್ಕೆ ಮುಂದೆ ಉದಾಹರಣೆಯುಂ ತೋಱಿದಪರ್.

ಸೂ ॥ ಅದಂತತಾ ಚ ॥ 109 ॥

ವೃ ॥ ತಯೋಃ ವಸ್ಸ ಯಸ್ಸ ಪ್ರತ್ಯಯಾಂತಯೋಃ ಉಪಾಂತ್ಯಸ್ಯ ದೀರ್ಘೇ ಕೃತೇ ಅಕಾರಾಂತತಾ ಚ ಭವತಿ ॥

ಉ ॥ ವಿದ್ವಾಂಸಂ, ಕನೀಯಾಂಸಂ.

ವಾಗ್ರಹಣಾನುವರ್ತನಾತ್ ಕ್ವಚಿದ್ವಿಕಲ್ಪಃ—ಉ ॥ ಜ್ಯಾಯಾಂಸಂ, ಜ್ಯಾಯಂ; ಶ್ರೇಯಾಂಸಂ, ಶ್ರೇಯಂ.

ಟೀ ॥ ಆ ವಸ್ಸ ಯಸ್ಸ ಪ್ರತ್ಯಯಾಂತಂಗಳ ಉಪಾಂತ್ಯಕ್ಕೆ ದೀರ್ಘಮಾಗುತ್ತಿರೆ, ಅದಂತತಾ ಚ=ಅವರ್ಕೆ ಅಕಾರಾಂತತೆಯುಮಕ್ಕುಂ. ಉ ॥ (ವೃ. ನೋ.)

ವಾಶಬ್ದಸ್ವೀಕಾರದಿಂ ಕೆಲವೆಡೆಯೊಳ್ ವಿಕಲ್ಪಮಕ್ಕುಂ. ಉ ॥ (ವೃ. ನೋ.)

ಸೂ ॥ ವಿರಾಮೇ ವ್ಯಂ[1]ಜನಸ್ಯ ॥ 110 ॥

ವೃ ॥ ವಿರಾಮೇ ವರ್ತಮಾನಸ್ಯ ವ್ಯಂಜನಸ್ಯ ಅಕಾರಾಂತತಾ ಭವತಿ ॥

ಉ ॥ ಸಂಪದಂ, ಮರುತಂ, ವಿಹಾಯಸಂ.

ಟೀ ॥ ವಿರಾಮೇ=ವಿರಾಮದಲ್ಲಿ ವರ್ತಿಸುತ್ತಿರ್ಪ. ವ್ಯಂಜನಸ್ಯ=ವ್ಯಂಜನಕ್ಕೆ ಅಕಾರಾಂತತೆಯುಕ್ಕುಂ. ಉ ॥ (ವೃ. ನೋ.)

ಸೂತ್ರ ॥ ಲೋಪೋ ವಿಭಾಷಯಾ ॥ 111 ॥

ವೃ ॥ ವಿರಾಮೇ ಸ್ಥಿತಸ್ಯ ವ್ಯಂಜನಸ್ಯ ವಿಭಾಷಯಾ ಲೋಪೋ ಭವತಿ ॥

ಉ ॥ ನವವಯಂ, ನವವಯಸಂ; ಜಾತವೇದಂ, ಜಾತವೇದಸಂ; ಉಶನಂ, ಉಶನಸಂ

ವ್ಯವಸ್ಥಿತವಿಭಾಷಯಾ ಕ್ವ[2]ಚಿಲ್ಲೋಪ ಏವ—ಉ ॥ ನಭಂ, ಮನಂ.

ಕ್ವಚಿದದಂತತ್ವಮೇವ—ಉ ॥ ದಿವಂ, ಕಕುಭಂ.

ಕ್ವ[3]ಚಿದುದಂತತ್ವಮೇವ । ವಿರಾಮೇ ದ್ವಿತ್ವಂ—ಉ ॥ ವಾಕ್ಕು, ದಿಕ್ಕು, ವೀರುತ್ತು, ಪರಿಷತ್ತು.

ಟೀ ॥ ಆ ವಿರಾಮದಲ್ಲಿ ವರ್ತಿಸುತ್ತಿರ್ಪ ವ್ಯಂಜನಕ್ಕೆ, ವಿಭಾಷಯಾ=ವಿಕಲ್ಪದಿಂ, ಲೋಪಃ=ಲೋಪಮಕ್ಕುಂ. ಉ ॥ (ವೃ. ನೋ.)

ಇದರ್ಕೆ ಅನ್ಯವ್ಯಾಕರಣಸೂತ್ರಂ—

---

1 ವ್ಯಂಜನಸ್ಯಾಪಿ. 2 ಕ್ವಚಿನ್ನಿತ್ಯಲೋಪಃ. 3 ಕ್ವಚಿದುದ್ವಿತ್ವಂ। ವಿರಾಮೇ ನಸ್ಯ ಕ್ವಚಿದ್ದ್ವಿತ್ವಮುತ್ವಂ ಭವತಿ— ಎಂದು ಒಂದು ಪ್ರತಿಯಲ್ಲಿದೆ.

ಜನಮುಲಿವ ಸಂಸ್ಕೃತವ್ಯಂ।
ಜನಾಂತಲಿಂಗಂಗಳತ್ವಮುಂ ದ್ವಿತ್ವದಿನು ॥
ತ್ವನಿಯೋಗಮನಂತ್ಯದ ।
ರ್ಶನಮುಂ ಮೇಣ್ ತಾಳ್ದೆ ಕನ್ನಡಕ್ಕವು ಲಿಂಗಂ ॥ (ಶ. ಮ. ದ. 86)

ಇದಱಿಂ ಕಿಱಿದು ದ್ವಿತ್ವಂಗೂಡಿದುಕಾರಾಂತಮುಕ್ಕುಂ. ಉ॥ ವಾಕ್ಕು ಇತ್ಯಾದಿ. (ವೃ. ನೋ.)

## ಸೂ ॥ ಮನಯೋರ್ಬಿಂದುಃ ॥ 112 ॥

ವೃ ॥ ಮಕಾರನಕಾರಯೋಃ ಬಿಂದುರ್ಭವತಿ ವಿರಾಮೇ ॥

ಉ ॥ ಕುಲಂ, ಜಲಂ, ಪೊಲಂ, ನೆಲಂ; ನೀಂ[1], ಆಂ, ತಾಂ.

ಟೀ ॥ ವಿರಾಮದಲ್ಲಿ ವರ್ತಿಸುತ್ತಿರ್ದ ಮನಯೋಃ — ಮಕಾರ ನಕಾರಂಗಳ್ಗೆ. ಬಿಂದುಃ—ಸೊನ್ನೆಯಕ್ಕುಂ. ಉ॥ (ವೃ, ನೋ.)

## ಸೂ ॥ ವರ್ಗೇ ತದ್ವರ್ಗಾಂತ್ಯಃ ॥ 113 ॥

ವೃ ॥ ವರ್ಗಾಕ್ಷರೇ ಪರೇ ಮ[2]ನಯೋಃ ಸ್ಥಾನೇ ತದ್ವರ್ಗಾಂತ್ಯಃ ಪಂಚಮೋ ಭವತಿ ॥

ಉ ॥ ಬೆಂಕಙ್ಗೆಟ್ಟಂ, ತಾಞ್ಜಟಿತ್ತಂ, ಸುತ್ತಣ್ಣುಕ್ಕಂ, ಮೆ[3]ಲ್ಪನೊತ್ತಿರ್ದಂ, ಬಲ್ಪಮ್ಬಿಸುಟಂ.

ಟೀ ॥ ಆ ಮಕಾರನಕಾರಂಗಳ್ಗೆ, ವರ್ಗೇ—ವರ್ಗಾಕ್ಷರಂ ಪರಮಾಗುತ್ತಿರೆ. ತದ್ವರ್ಗಾಂತ್ಯಃ—ಆವರ್ಗದ ಪಂಚಮಾಕ್ಷರಮಕ್ಕುಂ. ಉ॥ (ವೃ. ನೋ.)[4]

## ಸೂ ॥ ಣೋ ನಸ್ಯ ಣೇನ ॥ 114 ॥

ವೃ ॥ ಣಕಾರೇಣ ಯೋಗೇ ನಕಾರಸ್ಯ ಣತ್ವಂ ಭವತಿ ॥

ಉ ॥ ತಣ್ಣೆಲ್, ತಣ್ಣೀರ್.

ಟೀ ॥ ಣೇನ—ಣಕಾರದೊಡನೆ ಯೋಗಮಾದ. ನಸ್ಯ—ನಕಾರಕ್ಕೆ. ಣಃ—ಣಕಾರಮಕ್ಕುಂ. ಉ॥ (ವೃ. ನೋ.)

## ಸೂ ॥ ಪೇ[5] ಹೋ ವಾ ॥ 115 ॥

ವೃ ॥ ಪಕಾರಸ್ಯ ಸ್ಥಾನೇ ಹಕಾರೋ ವಾ ಭವತಿ ॥

ಉ ॥ ಪಲಗೆ, ಹಲಗೆ; ಕಾಪು, ಕಾಹು.

ಟೀ ॥ ಪೇ—ಪಕಾರದ ಸ್ಥಾನದಲ್ಲಿ. ವಾ—ವಿಕಲ್ಪದಿಂ. ಹಃ—ಹಕಾರಮಕ್ಕುಂ. ಉ ॥ (ವೃ. ನೋ.)

---

1 ಒಂದು ಪ್ರತಿಯಲ್ಲಿ ನೀಂ, ಆಂ, ತಾಂ, ಎಂಬ ಉದಾಹರಣೆಗಳಿಲ್ಲ. 2 ಅನುಸ್ವಾರಸ್ಯ. 3 ಒಂದು ಪ್ರತಿಯಲ್ಲಿ ಕಡೆಯ ಎರಡು ಉದಾಹರಣೆಗಳಿಲ್ಲ. 4 [illegible]—ಇತ್ತು ವಿಕಲ್ಪಮುಮಕ್ಕುಂ। ಬೆಂಕಂಗೆಟ್ಟನೆಂಬುದು— ಎರಡು ಒಂದು ಪ್ರತಿಯಲ್ಲಿವೆ. 5 ಪೇಃ

ಸೂ ‖ ಶಷಯೋಃ ಸಃ ‖ 116 ‖

ವೃ ‖ ಶಕಾರಷಕಾರಯೋಃ ಸಕಾರೋ ಭವತಿ ‖

ಉ ‖ ಸಸಿ, ಸೇಸೆ, ಸಿಸು, ಮಸಿ.

ಟೀ ‖ ಶಷಯೋಃ—ಶಕಾರಷಕಾರಂಗಳ್ಗೆ. ಸಃ—ಸಕಾರಮುಕ್ಕುಂ.
ಉ ‖ (ವೃ. ನೋ.)

ಸೂ ‖ ರೇಫಸಂಯೋಗೇ ತದಂತರೇ ತ್ವಿಃ ‖ 117 ‖

ವೃ ‖ ರೇಫಸಂಯೋಗೇ ಸತಿ ಶಷಯೋಃ ರೇಫಸ್ಯ ಚಾಂತರೇ ಇಕಾರೋ ಭವತಿ ‖

ಉ ‖ ಪರಿಸಂ, ಸಿರಿ; ಹರಿಸಂ, ಬರಿಸಂ, ಸರಿಸಮಂ.

ಟೀ ‖ ರೇಫಸಂಯೋಗೇ—ರೇಫೆ ಸಂಯೋಗಮಾಗುತ್ತಿರೆ. ತದಂತರೇ—ಆ ರೇಫೆಯು ಶಷಕಾರಂಗಳ ನಡುವೆ. ಇಃ—ಇಕಾರಮುಕ್ಕುಂ. ಉ ‖ (ವೃ. ನೋ.)

ಸೂ ‖ ಹಕಾರಸ್ಯೋಃ[1] ‖ 118 ‖

ವೃ ‖ ರೇಫಸಂಯೋಗೇ ಸತಿ ಹಕಾರರೇಫಯೋರಂತರೇ ಉಕಾರೋ ಭವತಿ ‖

ಉ ‖ ಅರುಹಂ, ಬರುಹಂ, ಅರುಹಂತಂ, ಗಾರುಹಸತ್ವಂ.

ಟೀ ‖ ಹಕಾರಸ್ಯ—ಹಕಾರಕ್ಕೆ. ರೇಫೆ ಸಂಯೋಗಮಾಗುತ್ತಿರೆ. ರೇಫೆಯು ಹಕಾರದ ನಡುವೆ, ಉಃ—ಉಕಾರಮುಕ್ಕುಂ. ಉ ‖ (ವೃ. ನೋ.)

ಸೂ ‖ ೞಕಾರಃ ಪದವಿಧೌ ಡಸ್ಯ ವ್ಯಂಜನೇಷು ‖ 119 ‖

ವೃ ‖ ಡಕಾರಸ್ಯ ಸ್ಥಾನೇ ವ್ಯಂಜನೇಷು ಪರೇಷು ಪದವಿಧೌ ಕ್ರಿಯಮಾಣೇ ೞಕಾರೋ ಭವತಿ ‖

ಉ ‖ ಕಾೞ್ಪುರಂ, ಕಾೞ್ಕಿಚ್ಚು, ನಾೞ್ಪಗರಣಂ, ನಾೞ್ನುಡಿ, ಕೋೞ್ಕುಟ್ಟು.

ಟೀ ‖ ಪದವಿಧೌ—ಸಮಾಸವಿಧಾನದಲ್ಲಿ. ವ್ಯಂಜನೇಷು—ವ್ಯಂಜನಂಗಳ್ ಪರಮಾಗುತ್ತಿರೆ. ಡಸ್ಯ—ಡಕಾರಕ್ಕೆ. ೞಕಾರಃ—ೞಕಾರಮುಕ್ಕುಂ.

ಉ ‖ (ವೃ. ನೋ.) ಇವರ್ಕೆ ಸಮಾಸವಿಧಿಯಲ್ಲಿ ಪೂರ್ವಪದದ ಅಂತ್ಯಸ್ವರಂ ಲೋಪಮಾಗಿ ಈ ರೀತಿಯಿಂ ರೂಪಂ ಸಿದ್ಧಂ.

ಸೂ ‖ ಅತಿ ಟಃ ‖ 120 ‖

ವೃ ‖ ಅತಿ ಪ್ರತ್ಯಯೇ ಪರೇ ಡ[2]ಕಾರಸ್ಯ ಟಕಾರೋ ಭವತಿ ‖

ಉ ‖ ಆಟಂ, ನೋಟಂ, ಮಾಟಂ, ಬೇಟಂ, ಕೂಟಂ, ಊಟಂ, ಕಾಟಂ, ಪಾಟಂ.

ಟೀ ‖ ಆ ಡಕಾರಕ್ಕೆ, ಅತಿ—ಅಪ್ರತ್ಯಯಂ ಪರಮಾಗುತ್ತಿರೆ. ಟಃ—ಟಕಾರಮುಕ್ಕುಂ. ಉ ‖ (ವೃ. ನೋ.)

1 ಸ್ಯೋಃತ. 2 ಡಕಾರೇ, ದಾಂತಸ್ಯ.

## ಸೂ ॥ ಱ[1]ಕಾರಸ್ಯ ರೇಫಃ ॥ 121 ॥

ವೃ ॥ ಱಕಾರಸ್ಯ ಸ್ಥಾನೇ ವ್ಯಂಜನೇಷು ಪರೇಷು ರೇಫೋ ಭವತಿ ॥

ಉ॥ ಮೂರ್ಕಣೆ, ಮೂರ್ಕೊರಲ್, ಮೂರ್ದನಿ, ಮೂರ್ದಡೆ, ನೂರ್ವಡಿ.

ಟೀ॥ ಱಕಾರಸ್ಯ = ಱಕಾರಕ್ಕೆ. ವ್ಯಂಜನಂ ಪರವಾಗುತ್ತಿರೆ, ರೇಫಃ = ರಕಾರವಕ್ಕುಂ. ಉ॥ (ವೃ. ನೋ.)

## ಸೂ ॥ ಆದೇರೃರಿಃ ॥ 122 ॥

ವೃ ॥ ಆದಿಭೂತಸ್ಯ ಋಕಾರಸ್ಯ ಸ್ಥಾನೇ ರಿಕಾರೋ ಭವತಿ ॥

ಉ॥ ರಿಣಂ, ರಿತು, ರಿಸಿ.

ಟೀ॥ ಆದೇಃ = ಶಬ್ದದ ಆದಿಯಾದ. ಋಃ = ಋಕಾರಕ್ಕೆ. ರಿಃ = ರಿಕಾರವಕ್ಕುಂ. ಉ॥ (ವೃ. ನೋ.)

## ಸೂ ॥ ಯವಯೋರನಾದಿಸ್ಥಯೋರೈ[2]ಔ ಸ್ವರೇಣ ವಾ ॥ 123 ॥

ವೃ ॥ ಅನಾದಿಭೂತಯೋಃ ಯಕಾರವಕಾರಯೋಃ ಸ್ಥಾನೇ ಸ್ವರೇಣ ಸಹ ಐ[3]ಔ ವಾ ಭವತಃ॥

ಉ॥ ಕಯ್ಸಾರಂ, ಕೈಸಾರಂ; ಪಾರಯಿಸಿದಂ, ಪಾರೈಸಿದಂ; ಕವುಂಗು, ಕೌಂಗು; ತವುದಲೆ, ತೌದಲೆ.

ಟೀ॥ ಅನಾದಿಸ್ಥಯೋಃ = ಆದಿಯಲ್ಲದಂತಪ್ಪ. ಯವಯೋಃ = ಯಕಾರವಕಾರಂಗಳ್ಗೆ. ಸ್ವರೇಣ = ಸ್ವರದೊಡನೆ ಕೂಡಿ. ವಾ = ವಿಕಲ್ಪದಿಂ. ಐ ಔ = ಐ, ಔ, ಎಂಬಿವಕ್ಕುಂ. ಉ॥ (ವೃ. ನೋ.)

ಇತಿ ಕರ್ಣಾಟಕವ್ಯಾಕರಣವಿವರಣೇ ಯುಷ್ಮದಾದಿವಿಧಾನಂ ನಾಮ

ಪಂಚಮಃ ಪರಿಚ್ಛೇದಃ.

---

1 ಱಶ್ಚ. 2 ರೈಚ್ ಸ್ವರೇಣ ವಾ. 3 ವಾ ಐಚ್ ಭವತಿ, ಯಥಾಸಂಖ್ಯಂ ವಾ ಐಚ್ ಭವತಿ.

## ೯. ಸಮಾಸವಿಧಾನಂ.

### ಸೂ ॥ ನಾಮ್ನಾಂ ಸಮಾಸಃ ಸಂಗತಾರ್ಥಃ ॥ 124 ॥

ವೃ ॥ ನಾಮ್ನಾಂ ನಾಮಪದಾನಾಂ ಸಂಗತಾರ್ಥಃ ಸಂಬಂಧಾರ್ಥಃ ಸಮಾಸೋ ವೇ[1]
ದಿತವ್ಯಃ[2] ॥

ಟೀ ॥ ನಾಮ್ನಾಂ=ನಾಮಪದಂಗಳ. ಸಂಗತಾರ್ಥಃ=ಕೂಡಿಸುಡಿವರ್ಥಂ. ಸಮಾಸಃ=ಸಮಾಸವೆಂಬುದು.

### ಸೂ ॥ ತ[3]ತ್ರಾಂತರ್ವರ್ತಿನ್ಯೋ ವಿಭಕ್ತಯೋ ಲೋಪ್ಯಾಃ ॥ 125 ॥

ವೃ ॥ ತತ್ರ ತಸ್ಮಿನ್ ಸಮಾಸೇ ಅಂ[4]ತರ್ವರ್ತಿನ್ಯೋ ವಿಭಕ್ತಯೋ ಲೋಪ್ಯಾ ಭವಂತಿ ॥

ಟೀ ॥ ತತ್ರ=ಆ ಸಮಾಸದಲ್ಲಿ. ಅಂತರ್ವರ್ತಿನ್ಯಃ=ನಡುವೆ ವರ್ತಿಸುತ್ತಿರ್ಪ. ವಿಭಕ್ತಯಃ=ವಿಭಕ್ತಿಗಳ್. ಲೋಪ್ಯಾಃ=ಲೋಪಿಸಲ್ಪಡುವುವು.

ಇದರ್ಕನ್ಯಲಕ್ಷಣಸೂತ್ರಂ—

> ಸಂಗತಿಯಿಂದಂ ನಾಮಪ ।
> ದಂಗಳವೇಕಾರ್ಥಗತಿಯೊಳಾಗೆ ಸಮಾಸಂ ॥
> ಸಂಗಳಿಸುಗುಂ ವಿಭಕ್ತಿಗ ।
> ಳಂಗಳ್ಗಂತರದೊಳಲ್ಲಿ ಲೋಪಮೆ ಅಕ್ಕುಂ ॥ (ಕಾವ್ಯಾವಲೋಕನ, ಸೂ. 45.)

ಸಮಾಸಾಃ ಕೇ ?

### ಸೂ ॥ ಉತ್ತರಪದಾರ್ಥವೃ[5]ತ್ತಿಸ್ತತ್ಪುರುಷಃ ॥ 126 ॥

ವೃ ॥ ಉ[6]ತ್ತರಪದಾರ್ಥೇ ವೃತ್ತಿರ್ಯಾ ಸಮಾಸಸ್ತತ್ಪುರುಷಸಂಜ್ಞೋ ಭವತಿ ॥

ಉ ॥ ಅರಮನೆ, ಸೂಳಗೇರಿ, ಮೂಂಗಾಯ್, ಸಿರ್ಪಿರೆ, ಆನೆವಾಲು, ಪೊನ್ನೋಲೆ.

ಟೀ ॥ ಉತ್ತರಪದಾರ್ಥವೃತ್ತಿಃ=ಮುಂದಣ ಪದದ ಅರ್ಥಮನೆ ಮುಖ್ಯಮಾಗುಳ್ಳುದು. ತತ್ಪುರುಷಃ=ತತ್ಪುರುಷಸಮಾಸಮೆಂಬುದು.

ಉ ॥ (ವೃ. ನೋ.) ಸೂಳೆಯರ ಕೇರಿ ಎಂಬಲ್ಲಿ ವಿಭಕ್ತಿಲೋಪಮಾಗಿ ಸೂಳಗೇರಿ ಎಂದಾಯ್ತು.

---

1 ಭವತಿ. 2 ಇದಾದಮೇಲೆ, ಸಂಗತಾರ್ಥಃ ಏಕಾರ್ಥ ಇತ್ಯರ್ಥಃ—ಎಂದು ಒಂದು ಪ್ರತಿಯಲ್ಲಿಯೂ, ಏಕಾರ್ಥೀಭಾವಃ ಸಮಾಸಶ್ಶಕ್ತಿರ್ಭಾವಃ—ಎಂದು ಮತ್ತೊಂದರಲ್ಲಿಯೂ ಇದೆ. 3 ತತ್ರಾಂತರ್ವರ್ತಿವಿಭಕ್ತೇರ್ಲೋಪಃ. 4 ಮಧ್ಯಸ್ಥಿತವಿಭಕ್ತೀನಾಂ ಲೋಪೋ ಭವತಿ. 5 ಪ್ರವೃತ್ತಿ. 6 ಉತ್ತರಪದಾರ್ಥವೃತ್ತಿಪ್ರಧಾನಃ ಸಮಾಸಃ.

## ಸೂ ॥ ಸ[1] ಏವೈಕಾಶ್ರಯಃ ಕರ್ಮಧಾರಯಃ ॥ 127 ॥

ವೃ ॥ ಸ[2] ಏವ ತತ್ಪುರುಷಃ ಏ[3]ಕಾಶ್ರಯಶ್ಚೇತ್ ಕರ್ಮಧಾರಯಸಂಜ್ಞೋ ಭವತಿ ॥

ಉ ॥ ನಸೆಕೋಳ್, ಕೆಂದಳಂ, ತೆಳ್ವಸಿಱ್, ಪೆರ್ದೊಗಲೆ, ಕರ್ನೆಯ್ದಿಲ್, ಕಟ್ಟಾಳ್.

ಟೀ ॥ ಸ ಏವ = ಆ ತತ್ಪುರುಷಸಮಾಸವು. ಏಕಾಶ್ರಯಃ = ಒಂದೇ ಅಧಿಕರಣವುಳ್ಳುದಾಗೆ. ಕರ್ಮಧಾರಯಃ = ಕರ್ಮಧಾರಯಸಮಾಸವೆಂದು ಪೆಸರಂ ಪಡೆಗುಂ.

ಉ ॥ (ವೃ. ನೋ.) ಕೆಂಪುಂ ತಾನೇ ತಾವರೆಯುಂ ತಾನೇ ಆಗಿ ಏಕಾಶ್ರಯವಾಗೆ ವಿಭಕ್ತಿಲೋಪವಾಗಿ ಕೆಂದಾವರೆ ಎಂದಾಯ್ತು.

## ಸೂ ॥ ಸಂಖ್ಯಾದಿಶ್ಚೇತ್ ದ್ವಿಗುಃ ॥ 128 ॥

ವೃ ॥ ಸಂ[4]ಖ್ಯಾದಿಪದಶ್ಚೇತ್ ಸ ಏವ ಕರ್ಮಧಾರಯಃ ದ್ವಿಗುಸಂಜ್ಞೋ ಭವತಿ ॥

ಉ ॥ ಒರ್ತಲೆ, ಒರ್ಪಡಿ, ಇರ್ಕೆಯ್, ಇರ್ಕಣ್, ಮೂಲೋಕಂ, ಮುಕ್ಕೊಡೆ, ನಾಲ್ಗಾವುದಂ, ಅಯ್ಸರಂ, ಅಯ್ವೆಂಡಿಱ್.

ಟೀ ॥ ಸಂಖ್ಯಾದಿಶ್ಚೇತ್ = ಆ ಕರ್ಮಧಾರಯಸಮಾಸವು ಸಂಖ್ಯಾಪದಂ ಮೊದಲೊಳುಳ್ಳುದಾದೊಡೆ. ದ್ವಿಗುಃ = ದ್ವಿಗುಸಮಾಸವೆಂದು ಪೆಸರಂ ಪಡೆಗುಂ. ಉ ॥ (ವೃ. ನೋ.)

## ಸೂ ॥ ಪೂರ್ವಪದಾರ್ಥಪ್ರಧಾನೋಽವ್ಯಯೀಭಾವಃ ॥ 129 ॥

ವೃ ॥ ಪೂ[5]ರ್ವಪದಾರ್ಥಮು[6]ಖ್ಯವೃತ್ತಿಃ ಸಮಾಸೋಽವ್ಯಯೀಭಾವಸಂಜ್ಞೋ ಭವತಿ ॥

ಉ ॥ ಕಿಱುಕ್ಕೆಱೆ, ಕಿಱುಪ್ಪೊಡೆ, ಮೇಂಗೆಯ್, ಮೇಂಗಾಲ್, ಅಂಗೆಯ್, ಅಂಗಾಲ್.

ಟೀ ॥ ಪೂರ್ವಪದಾರ್ಥಪ್ರಧಾನಃ = ಮೊದಲ ಪದದ ಅರ್ಥವನೆ ಮುಖ್ಯವಾಗುಳ್ಳುದು. ಅವ್ಯಯೀಭಾವಃ = ಅವ್ಯಯೀಭಾವಸಮಾಸವೆಂಬುದು. ಉ ॥ (ವೃ. ನೋ.)

## ಸೂ ॥ ಸ[7]ರ್ವಪದಾರ್ಥಪ್ರಧಾನೋ ದ್ವಂದ್ವಃ ॥ 130 ॥

ವೃ ॥ ಸ[8]ಮಸ್ತಪದಾನಾಂ ಸಮುಚ್ಚಯೋ ದ್ವಂದ್ವಸಮಾಸಸಂಜ್ಞೋ ಭವತಿ ॥

ಉ ॥ ಕೆಯ್ಮನೆಗಳ್, ಕೆಱೆತೊಱೆಗಳ್, ಕಱೆಮುಱಿಗಳ್, ನಾಡುಬೀಡುಗಳ್, ಬೆಟ್ಟ, ಗಟ್ಟಂಗಳ್, ಕೆಯ್ಕಾಲ್ಗಳ್.

ಟೀ ॥ ಸರ್ವಪದಾರ್ಥಪ್ರಧಾನಃ = ಎಲ್ಲಾಪದಂಗಳ ಅರ್ಥಮಂ ಮುಖ್ಯವಾಗುಳ್ಳುದು. ದ್ವಂದ್ವಃ = ದ್ವಂದ್ವಸಮಾಸವೆಂಬುದು. ಉ ॥ (ವೃ. ನೋ.)

---

1 ಸ ಏಕಾಶ್ರಯಃ. 2 ಭಿನ್ನಪ್ರವೃತ್ತಿನಿಮಿತ್ತಸ್ಯೈಕಾಶ್ರಯೇಷು ಸ ಏವ ತತ್ಪುರುಷಃ ಕರ್ಮಧಾರಯಸಂಜ್ಞೋ ಭವತಿ. 3 ಏಕಾಧಿಕರಣಶ್ಚೇತ್. 4 ಸಂಖ್ಯಾದಿಃ. 5 ಪೂರ್ವಪದಾರ್ಥಮುಖ್ಯವೃತ್ತಿಃ ಉತ್ತರಪದಾರ್ಥೋಪಸರ್ಜನಂ ಯತ್ರ ಸೋಽವ್ಯಯೀಭಾವಸಮಾಸಸಂಜ್ಞೋ ಭವತಿ. 6 ಸಮುಚ್ಚಯಃ 7 ಸರ್ವಪದಮುಖ್ಯೋ ದ್ವಂದ್ವಃ.
8 [illegible]

## ಸೂ ॥ ಅನ್ಯಪದಾರ್ಥಪ್ರಧಾನೋ ಬಹುವ್ರೀಹಿಃ ॥ 131 ॥

ವೃ ॥ ಅನ್ಯಸ್ಯ ಪ[1]ದಸ್ಯಾರ್ಥೇ ವ[2]ರ್ತಮಾನಃ ಸಮಾಸೋ ಬಹುವ್ರೀಹಿಸಂಜ್ಞೋ ಭವತಿ ॥

ಉ ॥ ಕರ್ಬುವಿಲ್ಲಂ, ಕುಡುವಿಲ್ಲಂ, ಕಲ್ಲೆರ್ದೆಯಂ, ಕುಸಿಗೊರಲಂ, ನುಚ್ಚುಕ್ಕಿವಲ್ಲಂ, ಕೆಂದಲೆಯುಂ, ಮೆಲ್ಲಡಿಯುಂ, ಕುಜಿಗೆಯ್ಯಂ, ಬಿಸುಗದಿರಂ, ತಣ್ಗದಿರಂ.

ಟೀ ॥ ಅನ್ಯಪದಾರ್ಥಪ್ರಧಾನಃ = ಮತ್ತೊಂದುಪದದ ಅರ್ಥಮನೆ ಮುಖ್ಯಮಾಗುಳ್ಳುದು. ಬಹುವ್ರೀಹಿಃ = ಬಹುವ್ರೀಹಿಸಮಾಸಮೆಂಬುದು.

## ಸೂ ॥ ಸಮಸಂಸ್ಕೃತಂ ದೇಶೀಯಪದೇನ ಸ[3]ಮಂ ಸಮಸ್ಯತೇ ॥ 132 ॥

ವೃ ॥ ಸಂಸ್ಕೃತಪದಸಮಂ ಯತ್ಪದಂ ತತ್ಸಮಸಂಸ್ಕೃತಂ । ತದ್ದೇಶೀಯಪದೇನ ಸ[4]ಮಂ ಸಮಸ್ಯತೇ ॥

ಉ ॥ ಪರದೇಸಂ, ಪರಕೊತ್ತೞಿ, ಪರವೆಣ್, ಪರಮಂಡಳಿಗಂ ; ಬಳ್ಗವಿ, ಪೆಳ್ಗವಿ, ಅಱಿಗವಿ ; ಕೂರಸಿ, ಮಾಜನಂ, ಮಾಪಾತಕಂ, ತುರಗದೞಂ, ಮಂ[5]ಗಳಾರತಿ, ಕಡುರಾಗಂ, ಪೊಡವೀಶಂ.

ಟೀ ॥ ಸಮಸಂಸ್ಕೃತಂ = ಸಮಸಂಸ್ಕೃತಪದಂ. ದೇಶೀಯಪದೇನ ಸಮಂ = ಕರ್ಣಾಟಕಪದದೊಡನೆ. ಸಮಸ್ಯತೇ = ಸಮಾಸಿಸಲ್ಪಡುವುದು.

ಸಮಸಂಸ್ಕೃತಮೆಂಬ ಪೆಸರನುಳ್ಳುದಕ್ಕೆ ಅನ್ಯಲಕ್ಷಣಸೂತ್ರಂ—

ಸಮುದಿತಸಂಖ್ಯಾವ್ಯಯರಹಿ ।
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ ॥
ತ್ತಮವರ್ಣಪ್ರಕೃತಿಗಳಂ ।
ಸಮಸಂಸ್ಕೃತಮೆಸರನಿಟ್ಟು ಲಿಂಗಂಮಾೞ್ಪರ್ ॥ (ಶ. ಮ. ದ. 80)

ನಾರದದಂಡಿಗೆ, ಶ್ರೀರಾಮಪಟ್ಟಣಂ. ಅಂತುಮಲ್ಲದೆಯುಂ ಕೆಲವುಂಟು–(ವೃ.ನೋ.)

## ಸೂ ॥ ಕಾರಕಂ ಪ[6]ರೇಣ ಸಮರ್ಥಕ್ರಿಯಾಪದೇನ ॥ 133 ॥

ವೃ ॥ ಕರ್ಮಾದಿಕಂ ಯತ್ಕಾರಕಂ ತ[7]ತ್ಪರತ್ರಾವಸ್ಥಿತೇನ ಸ[8]ಮರ್ಥೇನ ಕ್ರಿಯಾವಾಚಿನಾ ಪದೇನ ಸಮಂ ಸಮಸ್ಯತೇ ॥

ಉ ॥ ಊರೇೞಲ್ ಬಂದಂ, ನಾಟ್ಕುಡಿಪ್ಪೇದಂ, ತೆಱವೆತ್ತಂ, ಎಱ್ಱುಗೊಂಡಂ, ನೆಱೆಯಿರ್ದಂ, ಬಕ್ಕಲ್ವೋದಂ, ಬಿ[5]ಲ್ಲತ್ತಿದಂ, ಬಳೆದೊಟ್ಟಂ, ಸೇದೆವಡೆದಂ.

1 ಪದಸ್ಯಾರ್ಥೋ ಯತ್ರ ಸಮಸ್ಯತೇ ಸ ಸಮಾಸೋ. 2 ಸಮಸ್ಯಮಾನ್ಯಾರ್ಥಪದಂ ಯದಿ ವ್ಯರ್ಥ ಬಹುವ್ರೀಹಿಸಮಾಸೋ ಭವತಿ. 3 ಒಂದು ಪ್ರತಿಯಲ್ಲಿ ಸಮಂ ಎಂಬುದಿಲ್ಲ. 4 ಸಹ. 5 ಇಲ್ಲಿಂದ ಮುಂದೆ ಇರುವ ಉದಾಹರಣೆಗಳು ಒಂದು ಪ್ರತಿಯಲ್ಲಿ ಮಾತ್ರ ಇವೆ. 6 ಒಂದು ಪ್ರತಿಯಲ್ಲಿ ಪರೇಣ ಎಂಬುದಿಲ್ಲ. 7 ತತ್ಪರೋಽವಸ್ಥಿತೇನ. 8 ಸಮರ್ಥಕ್ರಿಯಾವಾಚಿನಾ.

ಟೀ॥ ಕಾರಕಂ=ಕರ್ಮಂ ಮೊದಲಾದ ಕಾರಕಪದಂ. ಪರೇಣ=ಮುಂದಣ. ಸಮರ್ಥಕ್ರಿಯಾಪದೇನ=ಸಮರ್ಥವಾದ ಕ್ರಿಯಾಪದದೊಡನೆ ಸಮಾಸಿಸಲ್ಪಡುಗುಂ. ಉ॥ (ವೃ. ನೋ.)

ಸೂ॥ ಅ[1]ಕಾರಾಂತಾನ್ಮಃ ॥ 134 ॥

ವೃ॥ ಅಕಾರಾಂತಾತ್ ಕಾರಕಾತ್ ಕ್ರಿ[2]ಯಾಪದೇನ ಸಮಸ್ಯಮಾನಾತ್ ಪರೋ ಮ[3]ಕಾರಾಗಮೋ ಭವತಿ ॥

ಉ॥ ಮನಂಗೊಳ್ಗುಂ, ಗುಣಂಗೊಂಡಂ, ಜಸಂಬಡೆದಂ, ಕಳಸವಿಟ್ಟಂ.

ಟೀ॥ ಅಕಾರಾಂತಾತ್=ಅಕಾರಾಂತವಪ್ಪ ಕಾರಕದತ್ತಣಿಂ ಪರವಾಗಿ. ಮಃ=ಮಕಾರಾಗಮಮಕ್ಕುಂ. ಉ॥ (ವೃ. ನೋ.)

ಸೂ॥ ವಿಶೇಷ್ಯೋತ್ತರಪ[4]ದಪೂರ್ವಪದಸ್ಯೋಪಾಂತ್ಯಸ್ವರಾದೇರ್ಲೋಪಃ ॥ 135 ॥

ವೃ॥ ವಿಶೇಷ್ಯೋತ್ತರಪದಸ್ಯ ವಿಶೇಷಣರೂಪತಯಾಽವಸ್ಥಿತಸ್ಯ ಪೂರ್ವಪದಸ್ಯ ಉಪಾಂತ್ಯಸ್ವರಾದೇರವಯವಸ್ಯ ಲೋಪೋ ಭವತಿ ॥

ಉ॥ ಕಾಮರ್ಗಡಾ, ಕೂರ್ವಾಳ್, ಇಮ್ಮಾವು, ಇಮ್ಮುನಿಸು, ನುಣ್ಬರಂ, ಬಳ್ಮಾತು, ಬಳ್ಗಣಂ, ಬಳ್ನುಡಿ, ಬಳ್ವಾನಸಂ.

ಟೀ॥ ವಿಶೇಷ್ಯೋತ್ತರಪದ ಪೂರ್ವಪದಸ್ಯ=ವಿಶೇಷಣರೂಪವಾಗಿರ್ದ ಮೊದಲ ಪದದ. ಉಪಾಂತ್ಯಸ್ವರಾದೇಃ=ಉಪಾಂತ್ಯಸ್ವರಮಂ ಆದಿಯಾಗುಳ್ಳ ಅವಯವಕ್ಕೆ. ಲೋಪಃ=ಲೋಪಮಕ್ಕುಂ.

ಉ॥ (ವೃ. ನೋ.)

ಸೂ॥ ಇಕಾರಸ್ಯೈದ್ಧ್ರಸ್ವಃ ॥ 136 ॥

ವೃ॥ ತಸ್ಮಿನ್ನುಪಾಂತ್ಯಸ್ವರಾದೇರ್ಲೋಪೇ ಕೃತೇ ಪೂ[5]ರ್ವಸ್ವರಸ್ಯ ಇಕಾರಸ್ಯ ಲಘ್ವೇಕಾರೋ ಭವತಿ ॥

ಉ॥ ಪೆರ್ಮರಂ, ಪೆರ್ವಾಳ್, [illegible], ಬೆಳ್ದಿಂಗಳ್.

ಟೀ॥ ಆ ಉಪಾಂತ್ಯಸ್ವರಾದಿಗೆ ಲೋಪಂ ಮಾಡಲ್ಪಡುತ್ತಿರೆ, ಇಕಾರಸ್ಯ=ಮೊದಲ ಇಕಾರಕ್ಕೆ. ಹ್ರಸ್ವಃ=ಲಘುವಪ್ಪ, ಏತ್=ಏಕಾರಮಕ್ಕುಂ. ಉ॥ (ವೃ. ನೋ.)

---

1 ಅಕಾರಾಂತಾದನುಸ್ವಾರಃ, ಮಕಾರಾಂತಾತ್. 2 ಒಂದು ಪ್ರತಿಯಲ್ಲಿ ಕ್ರಿಯಾಪದೇನಾ ಎಂಬುದಿಲ್ಲ. 3 ಆಗಮ್ಯತೋ ಭವತಿ. 4 ಪದ:. 5 ಪರಿಹ್ರಸ್ವ.

## ಸೂ ॥ ನ ಚ ಕ್ವ[1]ಚನ ॥ 137 ॥

ವೃ ॥ ಕ್ವಚಿದಿಕಾರಸ್ಯ ಪೂರ್ವೋಕ್ತಹ್ರಸ್ವೈಕಾರೋ ನ ಭವತಿ ॥

ಉ ॥ ಬಿಙ್ಗೊನೆ, ಬಿಣ್ಪೊಚಿ, ನಿಟ್ಟೆರ್ದ, ನಿಟ್ಟೆರ್ಕೆ

ಟೀ ॥ ಕ್ವಚನ — ಕೆಲವೆಡೆಯೊಳ್. ನ ಚ — ಇಕಾರಕ್ಕೆ ಹಿಂದ ಪೇೞ್ದ ಹ್ರಸ್ವಮಪ್ಪ ಏಕಾರಂ ಆಗದು. ಉ ॥ (ವೃ. ನೋ.)

## ಸೂ ॥ ಸ್ವ[2]ರಾದೌ ದೀರ್ಘಸ್ತ್ವಗುರೋಃ ॥ 138 ॥

ವೃ ॥ ಸ್ವ[3]ರಾದೌ ಪದೇ ಪ[4]ರೇ ಅ[5]ಗುರುಕಸ್ಯ ಪೂರ್ವಪದಸ್ಯ ದೀ[6]ರ್ಘಾದೇಶೋ ಭವತಿ ॥

ಉ ॥ ಕಾರೊಸಡು, ಕಾಂರುಳ್, ಪೇರೊಡಲ್.

ಅಗುರುವಿಶೇಷಣಾಂ ಕಿಂ? ಪಚ್ಚೆಲೆ, ಪಚ್ಚೆತ್ತಿ.

ನ ಚ ಕ್ವಚನೇತ್ಯ[7]ನುವರ್ತತೇ । ತಸ್ಮಾದಿ[8]ಹ ದೀರ್ಘೋ ಭವತಿ—

ಕೀಂಗೊರಲ್, ಈಂಚರಂ, ಕೀಂಗಡಲ್, ಕೀಂಬುಗೆ.

ಟೀ ॥ ಸ್ವರಾದೌ — ಸ್ವರಮಂ ಆದಿಯಾಗುಳ್ಳ ಪದಂ ಪರದಲ್ಲಿರೆ. ಅಗುರೋಃ — ಗುರುವಪ್ಪ ಅಕ್ಷರವಿಲ್ಲದ ಪೂರ್ವಪದಕ್ಕೆ. ತು — ಮತ್ತೆ. ದೀರ್ಘಃ — ದೀರ್ಘಮಕ್ಕುಂ. ಉ ॥ (ವೃ. ನೋ.)

ಸೂತ್ರದಲ್ಲಿಯ ಅಗುರು ಎಂಬ ಶಬ್ದವಿಶೇಷದಿಂ ಪೂರ್ವಪದದೊಳ್ ಗುರ್ವಕ್ಷರಮಿರೆ ದೀರ್ಘಮಾಗದು. ಉ ॥ (ವೃ. ನೋ.)

ನ ಚ ಕ್ವಚನ ಎಂಬುದು ಅನುವರ್ತಿಸುವದರಿಂದೆ ಇಕಾರಕ್ಕೆ ಹ್ರಸ್ವೈಕಾರವಾಗದು, ದೀರ್ಘಮೆ ಅಕ್ಕುಂ. ಉ ॥ (ವೃ. ನೋ.)

## ಸೂ ॥ ಣಟಳನತಾನಾಂ ದ್ವಿರ್ಭಾವಃ ॥ 139 ॥

ವೃ ॥ ಣಟಳನತಾನಾಂ ವರ್ಣಾನಾಂ ಉ[9]ಪಾಂತ್ಯಸ್ವರಾದ್ಯವಯವಸ್ಯ ಲೋಪೇ ಕೃತೇ ಅವಶಿಷ್ಟಾನಾಂ ಸ್ವರಾದಿಪದೇ ಪರೇ ದ್ವಿರ್ಭಾವೋ ಭವತಿ ॥

ಉ ॥ ತಣ್ಣೆಲರ್, ಕಟ್ಟಾಯಂ, ಬಳ್ಳಾಳ್, ಇನ್ನುಣಿಸು, ಕಿತ್ತಡಿ.

ಟೀ ॥ ಣಟಳನತಾನಾಂ — ಣ, ಟ, ಳ, ನ, ತ, ಎಂಬ ಅಕ್ಷರಂಗಳ್ಗೆ. ಸ್ವರಮನಾದಿಯಾಗುಳ್ಳ ಪದಂ ಪರಮಾಗಿರೆ, ಉಪಾಂತ್ಯಸ್ವರಾದ್ಯವಯವಕ್ಕೆ ಲೋಪವಾಗಿ, ದ್ವಿರ್ಭಾವಃ — ದ್ವಿತ್ವಮಕ್ಕುಂ. ಉ ॥ (ವೃ. ನೋ.)

---

1 ಕ್ವಚಿತ್. 2 ಸ್ವರಾದೌ ದೀರ್ಘೋಽಗುರೋಃ. 3 ಗುರುರಹಿತೇ ಸ್ವರಾದಿಪದೇ ಪರೇ ಪೂರ್ವಸ್ಯ ದೀರ್ಘಾದೇಶೋ ಭವತಿ. 4 ಪರತ್ರ ಸ್ಥಿತೇ. 5 ಅಗುರ್ವಕ್ಷರಸ್ಯ ಪೂರ್ವಸ್ಯ. 6 ದೀರ್ಘೋ ಭವತಿ. 7 ಕ್ವಚನಾನುವರ್ತನಾದಿಹ. 8 ಇಕಾರೋ. 9 ಉಪಾಂತ್ಯಸ್ಯ, ಉಪಾಂತ್ಯಸ್ವರಾದ್ಯವಯವಲೋಪಶಿಷ್ಟಾನಾಂ. ಉಪ. ಪ್ರತಿಯಲ್ಲಿ ಇಲ್ಲದ ಅವಶಿಷ್ಟಾನಾಂ ಪರತಃ ಇಲ್ಲ...

ಉ ॥ ಪೊಸಸುಗ್ಗಿ, ಪೊಸ ಅಡಕೆ; ಪೞುಗೆಳವೆ, ಪೞು ಅಲಗು; ಎಳವಸಾವು, ಎಳ ಅಂಚೆ; ಪೊಱುವಸಾಱು, ಪೊಱ ಅಡಿ; ಬೞಜಗಳಂ, ಬೞ ಅಟ್ಟುಂ.

ಕೇ[1]ಚಿದೊಳಸ್ಯ ಉ[2]ಳ್ಳಾದೇಶಮಿಚ್ಛಂತಿ—ಉಳ್ವಕ್ಕಂ, ಉಳ್ಳಾಳ್, ಉಳ್ಳಡೆ.

ಟೀ ॥ ಪೊಸತ್ವಾದೀನಾಂ—ಪೊಸತು, ಪೞದು, ಎಳದು, ಮೊದಲಾದ ಶಬ್ದಂಗಳ್ಗೆ. ಉಪಾಂತ್ಯಸ್ವರಾದ್ಯವಯವಂ ಲೋಪವಾಗಲೊಡಂ, ಅದಂತತ್ವಂ—ಅಕಾರಾಂತತೆ. ನಿಪಾತ್ಯತೇ—ನಿಪಾತಿಸಲ್ಪಡುಗುಂ. ಉ ॥ (ವೃ. ನೋ.)

ಕೆಲರ್ ಕರ್ಣಾಟಕಪ್ರಾಕ್ತನಾಚಾರ್ಯರ್ ಒಳಗಿಂಗೆ ಉಳ್ಳಾದೇಶಮುಮನಿಚ್ಛೈಸುವರ್—ಉ ॥ (ವೃ. ನೋ.)

ಸೂ ॥ ಕೆಚ್ಚನೆ ಬೆಚ್ಚನೆ ಪಚ್ಚನೆ ಶಬ್ದಾನಾಂ ಚಾದೇರ್ಮತ್ವಂ ॥ 145 ॥

ವೃ ॥ ಕೆಚ್ಚನೆ ಇ[3]ತ್ಯಾದಿಶಬ್ದಾನಾಂ ತ್ರಯಾಣಾಂ ಚಕಾರಾದೇಃ ಅ[4]ವಯವಸ್ಯ ವ್ಯಂಜನೇಷು ಪರೇಷು ಮತ್ವಂ ಭವತಿ ॥

ಉ ॥ ಕೆಂಗುಡಿ, ಕೆಂದಾವರೆ; ಬೆನ್ನೀರ್, ಬೆಂಬೂದಿ; ಪಂದಲೆ, ಪಂದಳಿರ್.

ಟೀ ॥ ಕೆಚ್ಚನೆ ಬೆಚ್ಚನೆ ಪಚ್ಚನೆ ಶಬ್ದಾನಾಂ—ಕೆಚ್ಚನೆ, ಬೆಚ್ಚನೆ, ಪಚ್ಚನೆ, ಎಂಬ ಶಬ್ದಂಗಳ. ಚಾದೇಃ—ಚಕಾರಮಂ ಆದಿಯಾಗುಳ್ಳ ಅವಯವಕ್ಕೆ. ವ್ಯಂಜನಂ ಪರಮಾಗುತ್ತಿರೆ, ಮತ್ವಂ—ಮಕಾರಮಕ್ಕುಂ. ಉ ॥ (ವೃ. ನೋ.)

ಸೂ ॥ ಸ್ವಂತತಾ ಚ ॥ 146 ॥

ವೃ ॥ ತೇ[5]ಷಾಂ ಕೆಚ್ಚನೆ ಪ್ರಭೃತೀನಾಂ ಸ್ವಂತತಾ ಚ ಭವತಿ ವ್ಯಂಜನೇ ಪರೇ ॥

ಉ ॥ ಕಿಸುಗಲ್, ಕಿಸುಗಾ[6]ಡು; ಬಿಸುಗದಿರ್, ಬಿಸುಗಲ್; ಪಸುವಂದರ್, ಪಸುವೊರ್ಣ.
ಯೋ[7]ಗವಿಭಾಗಾದಿಷ್ಟಸಿದ್ಧಿರಿತಿ ಕ್ವಚಿತ್ ಸ್ವಂತತಾ ನ ಭವತಿ—

ಪಚ್ಚಡಕೆ, ಪಚ್ಚೋಲೆ; ಬೆಚ್ಚಡಿ, ಬೆಚ್ಚೋಡು.

ಟೀ ॥ ಸ್ವಂತತಾ ಚ—ಆ ಕೆಚ್ಚನೆ ಮೊದಲಾದ ಶಬ್ದಂಗಳ್ಗೆ ವ್ಯಂಜನಂ ಪರಮಾಗುತ್ತಿರೆ ಸುಕಾರಾಂತತೆಯುಮಕ್ಕುಂ. ಉ ॥ (ವೃ. ನೋ.)

ಯೋಗವಿಭಾಗದಿಂ ಕೆಲವೆಡೆಯೊಳ್ ಸುಕಾರಾಂತತೆಯಾಗದು. ಉ ॥ (ವೃ. ನೋ.)

ಸೂ ॥ ಇ[8]ಕಾರೋ ವಿಭಾಷಯಾ ಶ್ವೈ[9]ತಃ ॥ 147 ॥

ವೃ ॥ ಸ್ವಂ[10]ತತಾವಿಧಾನೇ ಪಕಾರಸ್ಯ ಇಕಾರಾದೇಶೋ ವಿಭಾಷಯಾ ಭವತಿ ॥

ಉ ॥ ಕಿಸುವೊರ್ಣ, ಕಿಸುಸಂಜೆ; ಬಿಸುನೆತ್ತರ್, ಬಿಸುಸುಯಿಲ್.

---

1 ಕೇಚಿ [illegible]. 2 ಉಳ್ಳಾದೇಶ. 3 ಇತ್ಯಾದಿ [illegible]. 4 [illegible] ಪ್ರತಿಗಳಲ್ಲಿ ಈ ಪದ ವಿಲ್ಲ. 5 ಕ್ವಚಿತ್ ಶಬ್ದಾನಾಮ್ ಚಕಾರಾದೇಃ [illegible]. 6 ಗಾಳು. 7 ಯೋಗವಿಭಾಗಾದಿಷ್ಟ ಪ್ರಸಿದ್ಧಿಃ, ಯೋಗವಿಭಾಗಾತ್ ಕ್ವಚಿದಿಷ್ಟಪ್ರವೃತ್ತಿಃ, ಯೋಗವಿಭಾಗಾದಿಷ್ಟಪ್ರವೃತ್ತಿಸ್ಸ್ಯಾತ್. 8 [illegible] ಇಕಾರೋ ನಾ, [illegible], ಇಕಾರೋ [illegible]. 9 ಶ್ವೈತ. 10 ಸ್ವಂತತ್ವೇ ಚ.

ಟೀ ॥ ಏಕಾರ್ಥವಾಚಕಸ್ಯ = ಒಂದು ಎಂಬ ಶಬ್ದಕ್ಕೆ. ಅಂತೇ = ಕಡೆಯಲ್ಲಿ. ರಃ = ರೇಫಮಕ್ಕುಂ. ಉ ॥ (ವೃ. ನೋ.)

ಸೂ ॥ ಇರಾದೇಶೋ ದ್ವ್ಯರ್ಥಸ್ಯ ॥ 154 ॥

ವೃ ॥ ದ್ವ್ಯರ್ಥವಾ[1]ಚಕಸ್ಯ ದ್ವಿಗುಸಮಾಸೇ ಪೂರ್ವಪದಸ್ಯ ಇರಾದೇಶೋ ಭವತಿ ॥

ಉ ॥ ಇರ್ಮೆಯ್, ಇರ್ಕಣ್ಣಂ, ಈ[2]ರಯ್ಪು, ಈರೊಳ್ಪದರ.

ಅತ್ರ ಕ್ವಚಿತ್ ಸ್ವ[3]ಭಾವೋ ವಕ್ತವ್ಯಃ — ಎರಱಿಮ್ಮಡಿ, ಎರಱುಮ್ಮಡಿ, ಎರಱಕ್ಕಮೆ.

ಟೀ ॥ ದ್ವಿಗುಸಮಾಸದಲ್ಲಿ ಪೂರ್ವಪದವಾದ, ದ್ವ್ಯರ್ಥಸ್ಯ = ಎರಡು ಎಂಬ ಶಬ್ದಕ್ಕೆ. ಇರಾದೇಶಃ = ಇರ್ ಎಂಬ ಆದೇಶವಕ್ಕುಂ. ಉ ॥ (ವೃ. ನೋ.)

ಇಲ್ಲಿ ಕೆಲವೆಡೆಯೊಳ್ ಸ್ವಭಾವದೊಳಿರ್ಕುಂ — ಉ ॥ (ವೃ. ನೋ.)

ಕೆಲಂಬರ ಮತದಿಂ ಕಿಱಿದೆಡೆಯೊಳ್ ಈರಾದೇಶವಕ್ಕುಂ — ಈರಯ್ಪು, ಈರೊಳ್ಪದರ.

ಸೂ ॥ ಕಪವರ್ಗಯೋಸ್ತ್ರ್ಯ[4]ಖ್ಯಸ್ಯ ತಾ[5]ವಾಗಮೌ ಬಹುಳಂ ಹ್ರ[6]ಸ್ವಪೂರ್ವೌ ಚ ॥ 155 ॥

ವೃ ॥ ತ್ರಿಸಂಖ್ಯಾವಾಚಿನಃ ಶಬ್ದಸ್ಯ ಕಪವರ್ಗಯೋಃ ಪರಯೋಃ ತಾ[7]ವಾಗಮೌ ಹ್ರ[8]ಸ್ವಪೂರ್ವೌ ಬಹುಳಂ ಭವತಃ ॥

ಉ ॥ ಮುಕ್ಕೊಡೆ, ಮುಪ್ಪುರಿ, ಮುಪ್ಪೊಟಿಲ್, ಮುಮ್ಮಡಿ.

ಬಹುಳಗ್ರಹಣಾತ್ ಕ್ವಚಿನ್ನ ಭವತಿ — ಮೂಗೇಣ್, ಮೂಗಾವುದಂ, ಮೂವಣ್ಣಂ, ಮೂವಳಸು.

ಕ್ವಚಿದನ್ಯದೇವ — ಮುಯ್ಯೇಱ್ಸೂಱ್, ಮುಯ್ಯಾರಡಿ.

ಟೀ ॥ ತ್ರ್ಯಖ್ಯಸ್ಯ = ಮೂಱು ಎಂಬ ಶಬ್ದಕ್ಕೆ, ಕಪವರ್ಗಯೋಃ = ಕಪವರ್ಗಂಗಳ್ ಪರವಾಗುತ್ತಿರೆ. ತೌ = ಆ ಕಪವರ್ಗಂಗಳ್. ಬಹುಳಂ = ವಿಕಲ್ಪದಿಂ. ಹ್ರಸ್ವಪೂರ್ವೌ = ಹಸ್ವಾಕ್ಷರಪೂರ್ವಂಗಳಾಗಿ. ಆಗಮೌ = ಆಗಮಂಗಳಪ್ಪುವು. ಉ ॥ (ವೃ. ನೋ.)

ಸೂತ್ರದಲ್ಲಿ ಬಹುಳಶಬ್ದಸ್ವೀಕಾರದಿಂ ಕೆಲವೆಡೆಯೊಳಿಲ್ಲ — ಉ ॥ (ವೃ. ನೋ.)

ಸೂ ॥ ತ್ರ್ಯಾದೀನಾಂ ವ್ಯಂಜನೇಷ್ವೇವ ॥ 156 ॥

ವೃ ॥ ತ್ರ್ಯಾದೀನಾಂ ಸಂಖ್ಯಾವಾಚಿನಾಂ ಉಪಾಂತ್ಯವ್ಯಂಜನಾದೇರವಯವಸ್ಯ ಲೋಪೋ ಭವತಿ ವ್ಯಂಜನೇಷು ಪರೇಷು । ನ ಪುನಃ ಸ್ವರಾದೌ ॥

ಉ ॥ ಮೂಲೋಕಂ, ಮೂದೆಱಂ.

---

1 ವಚನಸ್ಯ. 2 ಇದಕ್ಕೆ ಹಿಂದೆ—ಕ್ವಚಿದೀರಾದೇಶಃ—ಎಂದು ಒಂದು ಪ್ರತಿಯಲ್ಲಿ ಸೂತ್ರ ಇದೆ. 3 ಇಕಾರಸ್ಯ ಸ್ವಭಾವೋ ವಕ್ತವ್ಯಃ. 4 ತ್ರಿ ಸಂಖ್ಯಸ್ಯ. 5 ತಾವಾಗಮೌ ಬಹುಳಂ ಹ್ರಸ್ವಪೂರ್ವಕೌ. 6 ಹ್ರಸ್ವಪೂರ್ವಕೌ. 7 ತಾವಾಗಮೌ ಹ್ರಸ್ವಪೂರ್ವಂ ಬಹುಳಂ ಭವತಿ. 8 ದ್ವಿತ್ವಹ್ರಸ್ವಪೂರ್ವಂ ಬಹುಳಂ ಭವತಿ.

ವ್ಯಂ[1]ಜನೇಷ್ವಿತಿ ಕಿಂ ? ಮೂಱಡಿ, ಮೂಱಾನೆ, ಮೂಱೆರೊಡ್ಡು.

ಟೀ ॥ ತ್ರ್ಯಾದೀನಾಂ—ಮೂಱೆಂಬ ಶಬ್ದಮನಾದಿಯಾಗುಳ್ಳ ಸಂಖ್ಯಾವಾಚಕಂಗಳ ಉಪಾಂತ್ಯವ್ಯಂಜನಮನಾದಿಯಾಗುಳ್ಳ ಅವಯವಕ್ಕೆ. ವ್ಯಂಜನೇಷ್ವೇವ—ವ್ಯಂಜನಂಗಳ್ ಪರಮಾದಲ್ಲಿಯೆ ಲೋಪಮಕ್ಕುಂ. ಉ ॥ (ವೃ. ನೋ.)

ವ್ಯಂಜನೇಷ್ವೇವ ಎಂಬುದಱಿಂದೆ ಸ್ವರಾದಿಶಬ್ದಂ ಪರದೊಳಿರೆ ಆ ಅವಯವಕ್ಕೆ ಲೋಪಮಾಗದು. ಉ ॥ (ವೃ. ನೋ.)

ಸೂ ॥ ನ ಷಡರ್ಥವಾ[2]ಚಕಸ್ಯಾಪಿ ತು ಹ್ರಸ್ವಸ್ತದಾದೇಃ ॥ 157 ॥

ವೃ ॥ ಷಡರ್ಥವಾಚಕಸ್ಯ ಶಬ್ದಸ್ಯ ಉಪಾಂತ್ಯವ್ಯಂಜನಾದೇರವಯವಸ್ಯ ಪ್ರಾಗುಕ್ತಲೋಪೋ ನ ಭವತಿ । ಅಪಿತು ತ[3]ದಾದೇಃ ಹ್ರಸ್ವೋ ಭವತಿ ॥

ಉ ॥ ಅಱುವಿಂಗಳ್, ಅಱುವೆರಲ್, ಅಱುಗೇಣ್, ಅಱುವತ್ತು.[4]

ಟೀ ॥ ಷಡರ್ಥವಾಚಕಸ್ಯ—ಆಱು ಎಂಬ ಶಬ್ದದ ಉಪಾಂತ್ಯವ್ಯಂಜನಮನಾದಿಯಾಗುಳ್ಳ ಅವಯವಕ್ಕೆ. ನ—ಪಿಂದೆ ಪೇೞ್ದ ಲೋಪಮಾಗದು. ಅಪಿತು—ಮತ್ತೆ ಏನಪ್ಪುದೆಂದೊಡೆ. ತದಾದೇಃ—ಆಱೆಂಬುದಱ ಆದಿಯ ಆಕಾರಕ್ಕೆ. ಹ್ರಸ್ವಃ—ಹ್ರಸ್ವಮಕ್ಕುಂ. ಉ ॥ (ವೃ. ನೋ.)

ಸೂ ॥ ಸಪ್ತಾರ್ಥಾಭಿಧಾಯಿನಶ್ಚ ॥ 158 ॥

ವೃ ॥ ಸಪ್ತಸಂ[5]ಖ್ಯಾಭಿಧಾಯಿನಃ ಶಬ್ದಸ್ಯ ಉ[6]ಪಾಂತ್ಯವ್ಯಂಜನಸ್ಯ ಲೋಪೋ ನ ಭವತಿ ।

ಉ ॥ ಏೞ್ಕಡಲ್, ಏೞ್ಪೊರೆ, ಏೞ್ಮೊಱಂ[7].

ಟೀ ॥ ಸಪ್ತಾರ್ಥಾಭಿಧಾಯಿನಶ್ಚ—ಏೞು ಎಂಬ ಶಬ್ದದ ಉಪಾಂತ್ಯವ್ಯಂಜನಕ್ಕೆ ಲೋಪಮಾಗದು. ಉ ॥ (ವೃ. ನೋ.)

ಸೂ ॥ ನ[8]ವಾಖ್ಯಾಯಾಸ್ತೊಮಾದೇಶಃ ಪಙ್ಕ್ತಿಹತೌ ॥ 159 ॥

ವೃ ॥ ನ[9]ವಾಖ್ಯಾಯಾಃ ಸಂಖ್ಯಾಯಾಃ ದ[10]ಶಹತೌ ತೊ[11]ಮಿತ್ಯಯಮಾದೇಶೋ ಭವತಿ ॥

ಉ ॥ ತೊಂಬತ್ತು.

ಟೀ ॥ ನವಾಖ್ಯಾಯಾಃ—ಒಂಬತ್ತು ಎಂಬ ಶಬ್ದಕ್ಕೆ. ಪಙ್ಕ್ತಿಹತೌ—ಪತ್ತು ಎಂಬ ಶಬ್ದಂ ಪರಮಾಗುತ್ತಿರೆ. ತೊಮಾದೇಶಃ—ತೊಂ ಎಂಬ ಆದೇಶಮಕ್ಕುಂ. ಉ ॥ (ವೃ. ನೋ.)

1 ವ್ಯಂಜನವಿಶೇಷಣಂ ಕಿಂ. 2 ವಾಚಕಸ್ಯಾದೇರ್ಹ್ರಸ್ವಃ. 3 ಆದೇಃ. 4 ಇಗಾದವೇಳ್, ನ ಪುನಃ ಸ್ವರೇ ಪರೇ—ಅಱಿಂ, ಅಱು ನೆ—ಎಂದು ಒಂದು ಪ್ರತಿಯಲ್ಲಿ ಪಾಠವಿದೆ. 5 ಸಂಖ್ಯಾರ್ಥಾಭಿಧಾಯಿನಃ. 6 ಉಪಾಂತ್ಯಸ್ವರಲೋಪೋ ಭವತಿ ತದಾದೇರ್ಹ್ರಸ್ವಶ್ಚ, ಪ್ರಾಕ್ತಸ್ವರಸ್ಯ ಲೋಪೋ ಭವತಿ ಆದೇರ್ಹ್ರಸ್ವಶ್ಚ. 7 ಇದಾದವೇಳ್, ಪ್ರಾಚಾದೇರ್ಹ್ರಸ್ವಶ್ಚ—ಎಲ್ಪತ್ತು, ಎಂಬ ಒಂದು ಪ್ರತಿಯಲ್ಲಿ ಇದೆ. 8 ನವಾಖ್ಯಾಯಾಸ್ತೊಂಭತ್ತು ಪಙ್ಕ್ತಿಹತೌ, ನವದಶೇ ತೊಂಭತ್ತು. 9 ನವದಶಶಬ್ದಸ್ಯ ತೊಂಭತ್ತಾದೇಶೋ ಭವತಿ. 10 ಸಂಖ್ಯಾದಶಕಹತೌ. 11 ತೊಂಭತ್ತು ಇತ್ಯಯಮಾದೇಶೋ ಭವತಿ, ತೊಮಿತ್ಯೇವಮಾದೇಶೋ ಭವತಿ.

## ಸೂ ॥ ಒಂ[1]ಬಯ್ ಶತೇ ॥ 160 ॥

ವೃ ॥ ನವಾಖ್ಯಾಯಾಃ ಶತವಾಚಿನಿ ಶಬ್ದೇ ಪರೇ ಒಂಬಯ್ ಇತ್ಯಯಮಾದೇಶೋ ಭವತಿ ॥

ಉ ॥ ಒಂಬಯ್ನೂಱು.

ಟೀ ॥ ಒಂಬತ್ತು ಎಂಬ ಶಬ್ದಕ್ಕೆ, ಶತೇ = ನೂಱು ಎಂಬ ಶಬ್ದಂ ಪರವಾಗುತ್ತಿರೆ. ಒಂಬತ್ = ಒಂಬಯ್ ಎಂಬಾದೇಶಮಕ್ಕುಂ. ಉ ॥ (ವೃ. ನೋ.)

## ಸೂ ॥ ಸಹಸ್ರೇ ಚ ॥ 161 ॥

ವೃ ॥ ನವಾಖ್ಯಾಯಾಃ ಸಹಸ್ರವಾಚಿನಿ ಶಬ್ದೇ ಪರೇ ಒಂಬ[2] ಭವತಿ ॥

ಉ ॥ ಒಂಬಯ್ಸಾಸಿರಂ.

ಟೀ ॥ ಒಂಬತ್ತು ಎಂಬ ಶಬ್ದಕ್ಕೆ, ಸಹಸ್ರೇ ಚ = ಸಾಸಿರಂ ಎಂಬ ಶಬ್ದಂ ಪರವಾಗುತ್ತಿರೆಯುಂ ಒಂಬಯ್ ಎಂಬಾದೇಶಮಕ್ಕುಂ. ಉ ॥ (ವೃ. ನೋ.)

## ಸೂ ॥ ದಶಾಖ್ಯಾಯಾಃ ಪಯಿರ್ ॥ 162 ॥

ವೃ ॥ ದಶಾಖ್ಯಾಯಾಃ ಸಹಸ್ರವಾಚಿನಿ ಪರೇ ಪಯಿರ್ ಇತ್ಯಯಮಾದೇಶೋ ಭವತಿ ॥

ಉ ॥ ಪ[3]ಯಿಂಚಾಸಿರಂ.

ಟೀ ॥ ದಶಾಖ್ಯಾಯಾಃ = ಪತ್ತು ಎಂಬ ಶಬ್ದಕ್ಕೆ. ಸಾಸಿರಂ ಎಂಬ ಶಬ್ದಂ ಪರವಾಗುತ್ತಿರೆ, ಪಯಿರ್ = ಪಯಿರ್ ಎಂಬಾದೇಶಮಕ್ಕುಂ. ಉ ॥ (ವೃ. ನೋ.)

## ಸೂ ॥ ಪನ್ನೇಕದ್ವ್ಯರ್ಥಯೋಃ ॥ 163 ॥

ವೃ ॥ ದಶಾಖ್ಯಾಯಾಃ ಏಕದ್ವ್ಯರ್ಥಯೋಃ ಪರಯೋಃ ಪನ್ ಇತ್ಯಯಮಾದೇಶೋ ಭವತಿ ॥

ಉ ॥ ಪನ್ನೊಂದು, ಪನ್ನೆರಡು.

ಟೀ ॥ ಪತ್ತು ಎಂಬ ಶಬ್ದಕ್ಕೆ, ಏಕದ್ವ್ಯರ್ಥಯೋಃ = ಒಂದು, ಎರಡು, ಎಂಬ ಶಬ್ದಂಗಳ್ ಪರವಾಗುತ್ತಿರೆ. ಪನ್ = ಪನ್ ಎಂಬಾದೇಶಮಕ್ಕುಂ ಉ ॥ (ವೃ. ನೋ.)

## ಸೂ ॥ ಅನ್ಯತ್ರ ಪದಿಃ ॥ 164 ॥

ವೃ ॥ ದ[4]ಶಾಖ್ಯಾಯಾಃ ಏಕದ್ವ್ಯರ್ಥಾಭ್ಯಾಮನ್ಯತ್ರ ಸಂಖ್ಯಾಶಬ್ದೇ ಪರೇ ಪದಿರಾದೇಶೋ ಭವತಿ ॥

ಉ ॥ ಪದಿಮೂಱು, ಪದಿನಾಲ್ಕು.

---

1 ಒಂಭ್ಯ. 2 ಇದಕ್ಕೆ ಬದಲು, ಸಹಸ್ರೇ ಇತ್ಯನುವರ್ತತೇ — ಎಂದು ಒಂದು ಪ್ರತಿಯಲ್ಲಿದೆ. 3 ಪಯಿರ್ಸಾಸಿರಂ, ಪಯಿಂಛಾಸಿರಂ. 4 ಅನುಕ್ತಸ್ಥಲೇ ದಶಶಬ್ದಸ್ಯ ಪದಿರ್ಭವತಿ.

ಟೀ॥ ಪತ್ತು ಎಂಬ ಶಬ್ದಕ್ಕೆ, ಅನ್ಯತ್ರ=ಉಳಿದ ಸಂಖ್ಯಾವಾಚಕಂಗಳ್ ಪರವಾಗೆ, ಪದಿಃ=ಪದಿ ಎಂಬಾದೇಶಮಕ್ಕುಂ. ಉ॥ (ವೃ. ನೋ.)

ಸೂ॥ ಸ್ವರಾದೌ[1] ನಾಗಮಃ ॥ 165 ॥

ವೃ॥ ದಶಾಖ್ಯಾಯಾಃ ಸ್ವರಾದಿಸಂಖ್ಯಾಯಾಂ ಪರಾಯಾಂ ಪ[2]ದಿರ್ಭವತಿ । ನಕಾರಾಗಮಶ್ಚ ॥

ಉ॥ ಪದಿನಯ್ದು, ಪದಿನಾಱು, ಪದಿನೇೞು, ಪದಿನೆಂಟು.

ಬಹುಳಾಧಿಕಾರಾತ್ ಕ್ವಚಿತ್ ಪ್ರಕೃತ್ಯೈವ[3] ತಿಷ್ಠತಿ—ಪತ್ತೊಂಬತ್ತು.

ಟೀ॥ ಪತ್ತು ಎಂಬ ಶಬ್ದಕ್ಕೆ, ಸ್ವರಾದೌ=ಸ್ವರಮನಾದಿಯಾಗುಳ್ಳ ಸಂಖ್ಯಾವಾಚಕಮಪ್ಪ ಪದಂ ಪರವಾಗೆ ಪದಿ ಎಂಬಾದೇಶಮಕ್ಕುಂ. ನಾಗಮಃ=ಅದಱ ಮುಂದೆ ನಕಾರಾಗಮಮುಮಕ್ಕುಂ. ಉ॥ (ವೃ. ನೋ.)

ಬಹುಳಾಧಿಕಾರದಿಂದೆ ಕೆಲವೆಡೆಯೊಳ್ ಸ್ವಭಾವದಿಂದಿರ್ಕುಂ—ಉ॥ (ವೃ. ನೋ.)

ಇತಿ ಕರ್ಣಾಟಕವ್ಯಾಕರಣವಿವರಣೇ ಸಮಾಸವಿಧಾನಂ ನಾಮ
ಷಷ್ಠಃ ಪರಿಚ್ಛೇದಃ.

---

1 ಸ್ವರಾದೌ ನಾಗಮಃ [illegible]. 2 ಪದೇ[illegible] ಭವತಿ. 3 [illegible] — [illegible].

# 7. ತದ್ಧಿತವಿಧಾನಂ.



## ಸೂ ॥ ತದಸ್ಯ ಪಣ್ಯಂ ಶಿಲ್ಪಂ ನಿ[1]ಯೋಗಶ್ಚೇತ್ಯಸ್ಮಿನ್ನಿಗಃ ॥ 166 ॥

ವೃ ॥ ತದಸ್ಯ ಪಣ್ಯಂ ತದಸ್ಯ ಶಿಲ್ಪಂ ಸೋಽಸ್ಯ ನಿ[2]ಯೋಗ ಇತ್ಯೇತಸ್ಮಿನ್ನರ್ಥೇ ತದಿತಿ ಪ್ರಥಮಾಂತಾತ್ ಪ್ರಕೃತಿವಿಶೇಷಾತ್ ಪರತಃ ಇಗಪ್ರತ್ಯಯೋ ಭವತಿ ॥

ಉ ॥ ಪಣ್ಯೇ — ತಂಬುಲಿಗಂ, ಗಂಧಿಗಂ, ದವಸಿಗಂ. ಶಿಲ್ಪೇ — ಸರವಂದಿಗಂ, ಪಟ್ಟಸಾಲಿಗಂ, ಚಿಪ್ಪಿಗಂ. ನಿಯೋಗೇ — ಭಂಡಾರಿಗಂ, ಬಾಣಸಿಗಂ, ಕೊಟ್ಟಾರಿಗಂ.

ಟೀ ॥ ತತ್ = ಅದು. ಅಸ್ಯ = ಈತಂಗೆ. ಪಣ್ಯಂ = ವ್ಯವಹಾರಂ. ಶಿಲ್ಪಂ = ಕೆಲಸಂ. ನಿಯೋಗಶ್ಚ = ಬಲಗಂ. ಇತಿ ಅಸ್ಮಿನ್ = ಎಂಬ ಈ ಅರ್ಥದಲ್ಲಿ. ಲಿಂಗದತ್ತಣಿಂ ಪರವಾಗಿ, ಇಗಃ = ಇಗಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ತದ್ವೇತ್ತ್ಯಧೀತೇ ವಾ ॥ 167 ॥

ವೃ ॥ ತದ್ವೇತ್ತಿ ತ[4]ದಧೀತೇ ಇತ್ಯೇತಸ್ಮಿನ್ನರ್ಥೇ ಇ[5]ಗಪ್ರತ್ಯಯೋ ಭವತಿ ॥

ಉ ॥ ಜೋಯಿಸಿಗಂ, ಗಣಿತಿಗಂ, ಸಿದ್ಧಾಂತಿಗಂ.

ಟೀ ॥ ತತ್ = ಅದಂ. ವೇತ್ತಿ = ಅಱಿವಂ, ಅಧೀತೇ ವಾ = ಪೇೞ್ ಓದುವಂ, ಎಂಬ ಅರ್ಥದಲ್ಲಿಯುಂ ಇಗಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ತದಾಚರತಿ ॥ 168 ॥

ವೃ ॥ ತದಿತಿ ದ್ವಿತೀಯಾಂತಾತ್ ಆಚರತಿ ಇತ್ಯೇತಸ್ಮಿನ್ನರ್ಥೇ ಇಗಪ್ರತ್ಯಯೋ ಭವತಿ ॥

ಉ ॥ ಪಡಿಸಣಿಗಂ, ಸುಂಕಿಗಂ.

ಟೀ ॥ ತತ್ = ಅದಂ. ಆಚರತಿ = ಆಚರಿಸುವಂ, ಎಂಬ ಅರ್ಥದಲ್ಲಿಯುಂ ಇಗಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ಇ[6]ಚಸ್ತತ್ರ ಜಾತೇ ಭವೇ ವಾ ॥ 169 ॥

ವೃ ॥ ತ[7]ತ್ರೇತಿ ಸಪ್ತಮ್ಯಂತಾತ್ ತತ್ರ ಜಾತಃ ತತ್ರ ಭವಃ ಇತ್ಯೇತಸ್ಮಿನ್ನರ್ಥೇ ಇಚಪ್ರತ್ಯಯೋ ಭವತಿ ॥

---

1 [illegible] ಇಗಃ. 2 [illegible] ಇತ್ಯಸ್ಮಿನ್ನರ್ಥೇ. 3 ತದಃ. 4 ಅಧಿ [illegible] 5 [illegible] ಪ್ರತಿಯಲ್ಲಿ ಪಾಠವಿದೆ. 6 ಇಚಪ್ರತ್ಯಯೋ [illegible] ಭವತಿ, [illegible]. 7 ತತ್ರೇತಿ [illegible] ಸಪ್ತಮ್ಯಂತಾತ್ [illegible] ಅರ್ಥೇ ಇಚಪ್ರತ್ಯಯೋ ಭವತಿ. 8 [illegible] ಇಚಪ್ರತ್ಯಯೋ ಭವತಿ.

ಉ ॥ ಪೊಱಲಿಚಂ, ಅಲರಿಚಂ, ಕರಸಡಿಚಂ, ಕಾಲುರಿಚಂ.

ಅತ್ರ ಯಥಾಲಕ್ಷ್ಯಂ ಹ್ರಸ್ವೋ ವಕ್ತವ್ಯಃ ।

ಟೀ ॥ ತತ್ರ=ಅಲ್ಲಿ. ಜಾತೇ ಭವೇ ವಾ=ಪುಟ್ಟಿದಂ ಮೇಣ್ ವರ್ತಿಸುವಂ ಎಂಬರ್ಥದಲ್ಲಿ. ಇಚಃ=ಇಚಪ್ರತ್ಯಯಮಕ್ಕುಂ. ಉ ॥ (ವೃ. ನೋ.)

ಇಲ್ಲಿ ಲಕ್ಷ್ಯಾನುಸಾರವಾಗಿ ಹ್ರಸ್ವಮಂ ಪೇೞವೇೞ್ಕುಂ—ಕಾಲೂರಿಚಂ ಎಂಬುದು ಕಾಲುರಿಚಂ ಎಂದಾಯ್ತು.[1]

## ಸೂ ॥ ವಳವಳ್ಳೌ ತತ್ರಾಧಿಕೃತೇ ॥ 170 ॥

ವೃ ॥ ತತ್ರೇತಿ ಸಪ್ತಮ್ಯಂತಾತ್ ಅಧಿಕೃತ[2] ಇತ್ಯೇತಸ್ಮಿನ್ನರ್ಥೇ ವಳ, ವಳ್ಳ, ಇತ್ಯೇತೌ ಭವತಃ ॥

ಉ ॥ ಅಡಪವಳಂ, ಅಡಪವಳ್ಳಂ; ಮಡಿವಳಂ, ಮಡಿವಳ್ಳಂ; ಸೆಜ್ಜೆವಳಂ, ಸೆಜ್ಜೆವಳ್ಳಂ; ಪಡೆವಳಂ, ಪಡೆವಳ್ಳಂ.

ಟೀ ॥ ತತ್ರ=ಅಲ್ಲಿ. ಅಧಿಕೃತೇ=ಇವಂಗಧಿಕಾರಂ ಎಂಬರ್ಥದಲ್ಲಿ. ವಳವಳ್ಳೌ=ವಳ ವಳ್ಳ ಎಂಬೆರಡು ಪ್ರತ್ಯಯಂಗಳಕ್ಕುಂ. ಉ ॥ (ವೃ. ನೋ.)

## ಸೂ ॥ ವ್ಯಾಪೃತೇ ಪ್ರವಣೇ ಚ ಕಾಱಃ ॥ 171 ॥

ವೃ ॥ ತತ್ರೇತ್ಯಧಿಕಾರೋ ವರ್ತತೇ । ತತ್ರೇತಿ ಸಪ್ತಮ್ಯಂತಾತ್ ವ್ಯಾಪೃತಃ ಪ್ರವಣಃ ಇತ್ಯೇತಯೋರರ್ಥಯೋಃ ಕಾಱಪ್ರತ್ಯಯೋ ಭವತಿ ॥

ಉ ॥ ಪಗೆಕಾಱಂ, ಬಗೆಕಾಱಂ, ನಡೆವಳಿಕಾಱಂ, ಬಿಡುಕಾಱಂ, ಬಿಲ್ಕಾಱಂ, ಮೊನೆಕಾಱಂ.

ಟೀ ॥ ವ್ಯಾಪೃತೇ ಪ್ರವಣೇ ಚ=ಇದಱೊಳಿರ್ಪಂ ವ್ಯಾಪೃತಂ, ಇದಱೊಳಿರ್ಪಂ ಆಸಕ್ತಂ, ಎಂಬ ಅರ್ಥಂಗಳಲ್ಲಿ. ಕಾಱಃ=ಕಾಱಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ತದಸ್ಯಾಸ್ತೀತಿ ವಂತಃ ॥ 172 ॥

ವೃ ॥ ತದಿತಿ ಪ್ರಥಮಾಂತಾತ್ ತದಸ್ಯಾಸ್ತೀತ್ಯೇತಸ್ಮಿನ್ನರ್ಥೇ ವಂತಪ್ರತ್ಯಯೋ ಭವತಿ ॥

ಉ ॥ ಸಿರಿವಂತಂ, ಗುಣವಂತಂ.

ಟೀ ॥ ತತ್=ಅದು. ಅಸ್ಯ=ಈತಂಗೆ. ಅಸ್ತಿ=ಉಂಟು. ಇತಿ=ಎಂಬ ಅರ್ಥದಲ್ಲಿ. ವಂತಃ=ವಂತಪ್ರತ್ಯಯಮಕ್ಕುಂ. ಉ ॥ (ವೃ. ನೋ.)

---

1 ಇದಾದಪೊಲೆ, ಕ್ವಚಿದಿಗಂಕಕ್ಕಂ—ಪೊಱಲಿಗಂ, ಅರಸಡಿಗಂ, ಕಾಲೂರಿಗಂ, ಎಂದು ಅನ್ಯಟೀಕೆಗಳಲ್ಲಿ ಪಾಠ ಇದೆ.
2 ಅಧಿಕಾರಾರ್ಥೇ. 3 ವಳವಳ್ಳಾವಿಕೃತೌ, ವಳವಳ್ಳಾ.

## ಸೂ ॥ ಉಪಮಾನೇ ಪೋಲ್ ॥ 173 ॥

ವೃ ॥ ಉ[1]ಪಮಾನಾರ್ಥೇ ವಿವಕ್ಷಿತೇ ಶ[2]ಬ್ದಾತ್ಪರತಃ ಪೋಲ್‌ಪ್ರತ್ಯಯೋ ಭವತಿ ॥

ಉ ॥ ಕರಿಪೋಲ್ ಭದ್ರಗುಣಂ, ಗಿರಿಪೋಲ್ ಸುಸ್ಥಿರಂ, ಹರಿಪೋಲ್ ಧೀರಂ, ಮನುಪೋಲ್ ನ[3]ಯಜ್ಞಂ.

ಟೀ ॥ ಉಪಮಾನೇ=ಉಪಮಾನಾರ್ಥದಲ್ಲಿ. ಪೋಲ್=ಪೋಲ್ ಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ಹ್ರಸ್ವೋಽಪಿ ವಾ ॥ 174 ॥

ವೃ ॥ ಅಪಿಚಾಸ್ಯ ಪೋಲ್‌ಪ್ರತ್ಯಯಸ್ಯ ಹ್ರಸ್ವೋ ವಾ ಭವತಿ ॥

ಉ ॥ ಹರಿಪೊಲಿಂದ್ರಜನಾಂತಿರೆ ಭೀತಿಯಿಂ.

ಟೀ ॥ ಆ ಪೋಲ್‌ಪ್ರತ್ಯಯಕ್ಕೆ, ವಾ=ವಿಕಲ್ಪದಿಂ. ಹ್ರಸ್ವೋಽಪಿ=ಹ್ರಸ್ವಮುಮಕ್ಕುಂ. ಉ ॥ (ವೃ. ನೋ.)

## ಸೂ ॥ ಅ[4]ಕಾರಾಂತಾನ್ಮಾಗಮೋ ಬಶ್ರುತಿಶ್ಚ ॥ 175 ॥

ವೃ ॥ ಅಕಾರಾಂತಾತ್ ಶಬ್ದಾತ್ ಉಪಮಾನಾರ್ಥೇ ಪೋಲ್‌ಪ್ರತ್ಯಯೇ ಪರೇ ಮಕಾರಾಗಮೋ ಭವತಿ । ಪಕಾರಸ್ಯ ಬಶ್ರುತಿಶ್ಚ ॥

ಉ ॥ ನಿಗಳಂಬೋಲ್ ತೊಡರ್ದುದು, ಚಂದ್ರಂಬೋಲ್ ತೊಳಗಿತ್ತು.

ತ[5]ಥಾ ಪ್ರಯೋಗೋ ಗು[6]ಣವರ್ಮಣಃ—

ಶ್ರೀ ರಾಜಾವರ್ತದಿಂ ಕಂಡರಿಸಿದ ಸ[7]ತಿಪೋಲ್ ಕೌಸ್ತುಭಂ ಮೇ[8]ಘಮಾಲಾ ।
ಕಾರಂಬೋಲ್ ಶಂಖಮು[9]ಮ್ಮಂಗೊಡಲಿಸು ಮುಗುಳ್ಪೋಲ್ ನಾಭಿಕೂಪೋಪಜಾತಂ ॥
ನೀರೇಜಂ ನೀಳ್ದ ಕನ್ನೆಯ್ದಿಲಪೊಲಿರೆ ತನುಚ್ಛಾಯೆಯಿಂ ಮಿಕ್ಕ ಲೋಕಾ ।
ಧಾರಂ ರಕ್ಷಿಪ್ಪನಕ್ಕೀಭುವನಭವನಮಂ ಗಾಂಗಚಕ್ರಾಯುಧಾಂಕಂ ॥

ಟೀ ॥ ಅಕಾರಾಂತಾತ್=ಅಕಾರಾಂತಮಪ್ಪ ಶಬ್ದದತ್ತಣಿಂ. ಪೋಲ್ ಪ್ರತ್ಯಯಂ ಪರಮಾಗುತ್ತಿರೆ, ಮಾಗಮಃ=ಆ ಶಬ್ದದ ಮುಂದೆ ಮಕಾರಾಗಮಮುಮಕ್ಕುಂ. ಬಶ್ರುತಿಶ್ಚ=ಪೋಲ್ ಎಂಬುದರ ಪಕಾರಕ್ಕೆ ಬಕಾರಮುಮಕ್ಕುಂ. ಉ ॥ (ವೃ. ನೋ.)

## ಸೂ ॥ ಸಂಖ್ಯಾಯಾಃ ಪೂರಣೇಽನೆಯಃ ॥ 176 ॥

ವೃ ॥ ಸಂಖ್ಯಾಯಾಃ ಪೂ[10]ರಣೇಽರ್ಥೇ ಅನೆಯಪ್ರತ್ಯಯೋ ಭವತಿ ॥

ಉ ॥ ಅಯ್ದನೆಯ ಚಕ್ರವರ್ತಿ, ಜಿ[11]ನಮುಪನರೊಳಗೆ ಪದಿನಾಱನೆಯಂ.

---

1 ಉಪಮಾನೇಽರ್ಥೇ. 2 ಶಬ್ದಾತ್ ಪರತಃ. 3 ಮತಿವಂತಂ. 4 ಅಕಾರಾಂತಾನ್ಮಾಗಮಃ. 5 ಈ ವಾಕ್ಯವೂ ಮುಂದಿನ ಪದ್ಯವೂ ಒಂದು ಪ್ರತಿಯಲ್ಲಿಲ್ಲ. 6 ಗುಣವರ್ಮಸ್ಯ. 7 ಸತಿಪೋಲ್. 8 ಬಂಧೆ. 9 ಮಮಾಂಗದಹರೆಯ.
10 ಪೂರಣೇ ವಿವಕ್ಷಿತೇ. 11 ಕಾವ್ಯಾವಲೋಕನ, 869.

ಟೀ ॥ ಸಂಖ್ಯಾಯಾಃ=ಸಂಖ್ಯೆಯ. ಪೂರಣೇ=ಪೂರಣಾರ್ಥದಲ್ಲಿ. ಆನೆಯಃ= ಆನೆಯಪ್ರತ್ಯಯಮಕ್ಕುಂ.

ಉ ॥ ಪದಿನಾಱನೆಯಂ ತೀರ್ಥಂಕರಂ ಶಾಂತಿನಾಥಂ.

ಜಿ[1]ನಮುದನರೊಳಗೆ ಪದಿನಾ ।
ಱನೆಯಂ ತತ್ಸಕಳಚಕ್ರವರ್ತಿಗಳೊಳಗ ॥
ಯ್ದನೆಯನೆನೆ ಪುಣ್ಯಪುಂಜಾ ।
ರ್ಜನಕ್ಕೆ ಶಾಂತೀಶನಂತು ನೋಂತವರೊಳರೇ ॥

## ಸೂ ॥ ವಾ[2]ರಾರ್ಥೇ ಮೆ ವಾ ॥ 177 ॥

ವೃ ॥ ಸಂಖ್ಯಾವಾಚಿನಾಂ ವಾ[3]ರಾರ್ಥೇ ಮೆಪ್ರತ್ಯಯೋ ವಾ ಭವತಿ ॥

ಉ ॥ ಒರ್ಮೆ, ಇರ್ಮೆ, ಮೂಮೆ, ನಾಲ್ಮೆ, ನೂರ್ಮೆ, ಸಾಸಿರ್ಮೆ.

ಪಕ್ಷೇ—ಒಂದುಸೂಳ್, ಎರಡುಸೂಳ್, ಮೂಱುಸೂಳ್, ಇತ್ಯಾದಿ.

ಟೀ ॥ ಸಂಖ್ಯಾವಾಚಕಂಗಳ್ಗೆ, ವಾರಾರ್ಥೇ=ಸೂಳ್ ಎಂಬ ಅರ್ಥದಲ್ಲಿ. ವಾ= ವಿಕಲ್ಪದಿಂ. ಮೆ=ಮೆಪ್ರತ್ಯಯಮಕ್ಕುಂ. ಉ ॥ (ವೃ. ನೋ.)

ವಿಕಲ್ಪದಲ್ಲಿ—ಒಂದುಸೂಳ್ ಇತ್ಯಾದಿ. (ವೃ. ನೋ.)

## ಸೂ ॥ ಭಾ[4]ವೇ ಕೆಪು ॥ 178 ॥

ವೃ ॥ ಭಾವಾರ್ಥೇ ಕೆ, ಪು, ಇತ್ಯೇತೌ ಪ್ರತ್ಯಯೌ ಭವತಃ ॥

ಉ ॥ ಕಾಣ್ಕೆ, ತೆರಳ್ಕೆ, ಪೂಣ್ಕೆ ; ತಿಣ್ಪು, ಗುಣ್ಪು, ಸೊಂಪು.

ಟೀ ॥ ಭಾವೇ=ಭಾವಾರ್ಥದಲ್ಲಿ. ಕೆಪು=ಕೆ ಪು ಎಂಬೆರಡುಪ್ರತ್ಯಯಂಗಳಕ್ಕುಂ. ಉ ॥ (ವೃ. ನೋ.)

## ಸೂ ॥ ಚೇ[5]ತನೇಪ್ಯಿಕೆಉಮೆತನಾನಿ ॥ 179 ॥

ವೃ ॥ ಚೇತನವಿಷಯೇ ಭಾವೇ ವಿವಕ್ಷಿತೇ ಪು[6]ನಃ ಇಕೆ, ಉ, ಮೆ, ತನ, ಇತ್ಯೇತೇ ಪ್ರತ್ಯಯಾ ಭವಂತಿ.

ಉ ॥ ಮಾನಸಿಕೆ, ಆಯಸಿಕೆ ; ಉರ್ಕು, ಸೊರ್ಕು ; ಕೂರ್ಮೆ, ಪೆರ್ಮೆ ; ಕಲಿತನಂ, ಆಳ್ತನಂ

1 ಕಾವ್ಯಾವಲೋಕನ, ೨96. 2 ವಾರಾರ್ಥೇ ಮೇ. 3 ಒಂದುಸೂಳು, ಎರಡುಸೂಳು, ಇತಿ ವಾರಾರ್ಥೇ ಮ ಪ್ರತ್ಯಯೋ ಭವತಿ. 4 ಭಾವಾರ್ಥೇ ಕಪೂ. 5 ಚೇತನೇಪ್ಸಿಕಮತನಾನಿ. 6 ಕೆಲವು ಪ್ರತಿಗಳಲ್ಲಿ ಸ್ವಃ ಎಂಬುದಿಲ್ಲ.

ಟೀ ॥ ಚೇತನೇಷು=ಚೇತನವಿಷಯದಲ್ಲಿ. ಭಾವಂ ವಿವಕ್ಷಿತವಾಗುತ್ತಿರೆ, ಇಕೆ ಉ ವೆ ತನಾನಿ=ಇಕೆ, ಉ, ವೆ, ತನ, ಎಂಬ ಪ್ರತ್ಯಯಂಗಳಕ್ಕುಂ. ಉ ॥ (ವೃ. ನೋ.)

## ಸೂ ॥ ಕ್ರಿ[1]ಯಾರ್ಥಾದತ್ ॥ 180 ॥

ವೃ ॥ ಕ್ರಿಯಾವಾಚಿನಃ ಶಬ್ದಾತ್ ಭಾವೇ ಅ[2]ತ್ಪ್ರತ್ಯಯೋ ಭವತಿ ॥

ಉ ॥ ನೋಟಂ, ಓಟಂ, ಊಟಂ, ಪೇಟಂ, ಸೋಲಂ, ಸಾಲಂ.

ಟೀ ॥ ಕ್ರಿಯಾರ್ಥಾತ್=ಕ್ರಿಯಾವಾಚಕವಪ್ಪ ಶಬ್ದದತ್ತಣಿಂ ಪರವಾಗಿ. ಭಾವಾರ್ಥದಲ್ಲಿ, ಅತ್=ಅತ್ ಎಂಬ ಪ್ರತ್ಯಯಮಕ್ಕುಂ. ಉ ॥ (ವೃ. ನೋ.)

ಅತಿ ಟಃ (120) ಎಂಬ ಸೂತ್ರದಿಂ ಡಕಾರಕ್ಕೆ ಅತ್ಪ್ರತ್ಯಯಂ ಪರವಾಗೆ ಟಕಾರವಾಯ್ತು.

## ಸೂ ॥ ಅದು ಇದು ಏ[3]ನ್ಭ್ಯಃ ಪ್ರಮಾಣೇ ನಿತುಃ ॥ 181 ॥

ವೃ ॥ ಅದು, ಇದು, ಏನ್, ಇತ್ಯೇತೇಭ್ಯಃ ಪ್ರ[4]ಮಾಣಾರ್ಥೇ ನಿ[5]ತುಃಪ್ರತ್ಯಯೋ ಭವತಿ ॥

ಉ ॥ ಅನಿತು, ಇನಿತು, ಎನಿತು.

ಅತ್ರ ತಕಾರಸ್ಯ ದಿತ್ವಂ ಕೇಚಿದಿಚ್ಛಂತಿ—ಅನಿತ್ತು, ಇನಿತ್ತು, ಎನಿತ್ತು.

ತಥಾ ಚ ಪ್ರಯೋಗಃ—

ಎ[6]ನಿತ್ತನಿತ್ತಂಬುಜಪತ್ರನೇತ್ರೆಯಾ ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತಂ ವನದೊಳ್ ವನೇಚರಂ ।
ತನತ್ತು ಬಿಲ್ಲಾನದನಂತೆ ಕ[7]ತ್ತುಗುಂ ॥

ಟೀ ॥ ಅದು ಇದು ಏನ್ಭ್ಯಃ=ಅದು, ಇದು, ಏನ್, ಎಂಬ ಶಬ್ದಂಗಳತ್ತಣಿಂ ಪರವಾಗಿ. ಪ್ರಮಾಣೇ=ಪ್ರಮಾಣಾರ್ಥದಲ್ಲಿ. ನಿತುಃ=ನಿತು ಎಂಬ ಪ್ರತ್ಯಯಮಕ್ಕುಂ. ಉ ॥ (ವೃ. ನೋ.)

ಇಲ್ಲಿ ಕೆಲಂಬರ್ ಕರ್ಣಾಟಭಾಷಾಚಾರ್ಯರ್ ತಕಾರಕ್ಕೆ ದ್ವಿತ್ವಮನೊಡಂಬಡುವರ್. ಉ ॥ (ವೃ. ನೋ.)

## ಸೂ ॥ ಪ್ರಕಾರಕಾಲಾರ್ಥೇ ಂತು[8]ಂದೂ ॥ 182 ॥

ವೃ ॥ ಅದು, ಇದು, ಏನ್, ಇ[9]ತ್ಯೇತೇಭ್ಯಃ ಪ್ರಕಾರಾರ್ಥೇ ಕಾಲಾರ್ಥೇ ಚ ಯಥಾಸಂಖ್ಯಂ ಂತು, ಂದು, ಇತ್ಯೇತೌ ಪ್ರತ್ಯಯೌ ಭವತಃ ॥

---

1 ಕ್ರಿಯಾರ್ಥಾದ್ವಾವೇತ್, ಕ್ರಿಯಾರ್ಥಾದಃ. 2 ಅಕಾರೋ ಭವತಿ. 3 ಏನುಭ್ಯಃ. 4 ಪ್ರಮಾಣೇರ್ಥೇ. 5 ಅಂತೇ ನಿಶಾಭರ್ತಿ. 6 ಕಾವ್ಯಾವಲೋಕನ, 359. 7 ಕಿಚ್ಚುವಂ, ಕೋಪಮಂ. 8 ತಂದೂ. 9 ಏತೇಷಾಂ ಮಂತೇ.

ಉ ॥ ಪ್ರಕಾರಾರ್ಥೇ—ಅಂತು, ಇಂತು, ಎಂತು. ಕಾಲಾರ್ಥೇ—ಅಂದು, ಇಂದು, ಎಂದು.

ಟೀ ॥ ಅದು, ಇದು, ಏ, ಎಂಬ ಶಬ್ದಂಗಳತ್ತಣಿಂ ಪರಮಾಗಿ, ಪ್ರಕಾರಕಾಲಾರ್ಥೇ= ಪ್ರಕಾರಾರ್ಥದಲ್ಲಿ ಮತ್ತಂ ಕಾಲಾರ್ಥದಲ್ಲಿ. ಂತುಂದೂ=ಯಥಾಕ್ರಮದಿಂ ಂತು ಂದು ಎಂಬ ಪ್ರತ್ಯಯಂಗಳಕ್ಕುಂ. ಉ ॥ (ವೃ. ನೋ.)

## ಸೂ ॥ ಆಳಿಸ್ತಾಚ್ಛೀಲ್ಯೇ ॥ 183 ॥

ವೃ ॥ ತಾ[1]ಚ್ಛೀಲ್ಯೇ ವಿವಕ್ಷಿತೇ ಆಳಿಪ್ರತ್ಯಯೋ ಭವತಿ ॥

ಉ ॥ ಓದಾಳಿ, ಜೂದಾಳಿ, ಮಾತಾಳಿ, ಸಿಗ್ಗಾಳಿ, ಏಱಾಳಿ, ಪಡಪಾಳಿ.

ಟೀ ॥ ತಾಚ್ಛೀಲ್ಯೇ=ಅದು ಇವಂಗೆ ಶೀಲಂ ಎಂಬ ಅರ್ಥದಲ್ಲಿ. ಆಳಿಃ=ಆಳಿಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ಕು[2]ಳಿಶ್ಚ ॥ 184 ॥

ವೃ ॥ ತಾ[3]ಚ್ಛೀಲ್ಯೇ ವಿವಕ್ಷಿತೇ ಕುಳಿಪ್ರತ್ಯಯೋಽಪಿ ಭವತಿ ॥

ಉ ॥ ಆಟಕುಳಿ, ಅಂಜುಕುಳಿ, ಓಡುಕುಳಿ.

ಟೀ ॥ ಅದು ಇವಂಗೆ ಶೀಲಂ ಎಂಬರ್ಥದಲ್ಲಿ, ಕುಳಿಶ್ಚ=ಕುಳಿಪ್ರತ್ಯಯಮುಮ ಕ್ಕುಂ. ಉ ॥ (ವೃ. ನೋ.)

## ಸೂ ॥ ತ[4]ತ್ಕರೋತೀತ್ಯಸ್ಮಾದ್ಗಾಱಃ ॥ 185 ॥

ವೃ ॥ ತ[5]ತ್ಕರೋತೀತ್ಯೇತಸ್ಮಿನ್ನರ್ಥೇ ತದಿತಿ ದ್ವಿತೀಯಾಂತಾತ್ ಗಾಱಪ್ರತ್ಯಯೋ ಭವತಿ ॥
ಉ ॥ ಮಣಿಗಾಱಂ, ಕಂಚಗಾಱಂ, ಬಳೆಗಾಱಂ, ಮಾಲೆಗಾಱಂ.

ಟೀ ॥ ತತ್=ಅದಂ. ಕರೋತಿ=ಮಾಡುವಂ. ಇತಿ=ಎಂಬರ್ಥದಲ್ಲಿ. ಅಸ್ಮಾತ್= ಆ ಶಬ್ದದತ್ತಣಿಂ ಪರಮಾಗಿ. ಗಾಱಃ=ಗಾಱಪ್ರತ್ಯಯಮಕ್ಕುಂ. ಉ ॥ (ವೃ. ನೋ.)

## ಸೂ ॥ ಉ[6]ದಂತಾನ್ಮಾಗಮೋ ಬಹುಳಂ ॥ 186 ॥

ವೃ ॥ ಉಕಾರಾಂತಾತ್ ಶಬ್ದಾತ್ ಗಾಱಪ್ರತ್ಯಯೇ ಕೃತೇ ಬಹುಳಂ ಮ[7]ಕಾರಾಗಮೋ ಭವತಿ ॥

ಉ ॥ ಪಾಡುಂಗಾಱಂ, ಜೂದುಂಗಾಱಂ.

ಬ[8]ಹುಳಗ್ರಹಣಾತ್— ಸೊಂಪುಗಾಱಂ, ಕಂಪುಗಾಱಂ.

---

1 ಶೀಲಾರ್ಥೇ. 2 ಒಂದು ಪ್ರತಿಯಲ್ಲಿ ಈ ಸೂತ್ರವೇ ಇಲ್ಲ. 3 ಶೀಲಾರ್ಥೇ. 4 ತತ್ಕರೋತೀತ ಸ್ಮಾದ್ಗಾಱಃ, ತತ್ಕರೋತ್ಯರ್ಥೇ ಗಾಱಃ. 5 ತದಿತಿ ದ್ವಿತೀಯಾಂತಾತ್ಕರೋತ್ಯರ್ಥೇ ಗಾಱಿಪ್ರತ್ಯಯೋ ಭವತಿ. 6 ಉದಂತಾನ್ಮಾಗಮೋ ಬಹುಳಂ. 7 ಮಕಾರಾಗಮೋ. 8 ಬಹುಳಪಕ್ಷೇ.

ಟೀ ॥ ಉದಂತಾತ್—ಉಕಾರಾಂತಮಪ್ಪ ಶಬ್ದದತ್ತಣಿಂ ಪರಮಪ್ಪ, ಗಾಱಪ್ರತ್ಯಯಂ ಬರೆ, ಬಹುಳಂ—ವಿಕಲ್ಪದಿಂ, ಮಾಗಮಃ—ಮಕಾರಾಗಮಮಕ್ಕುಂ. ಉ ॥ (ವೃ. ನೋ.)

ಸೂ ॥ ಅ[1]ಪಭ್ರಂಶೇಽಪ್ಯೇವಂ ಕಾರಸ್ಯ ॥ 187 ॥

ವೃ ॥ ಸಂ[2]ಸ್ಕೃತಾದಪಭ್ರಂಶವಿಷಯೇ ಕಾರಶಬ್ದಸ್ಯ ಗಾಱಾದೇಶೋ ಭವತಿ । ಯಥಾಲಕ್ಷ್ಯಂ ಮ[3]ಕಾರಾಗಮಶ್ಚ ॥

ಉ ॥ ಮಾಲೆಗಾಱಂ, ಸಮ್ಮಗಾಱಂ.

ಬಹುಳಗ್ರಹಣಾತ್ ಕ್ವ[4]ಚಿದಾ ಆ[5]ದಿಲೋಪೋ ದೃಶ್ಯತೇ—

ಕಮ್ಮಾಱಂ, ಕಮ್ಮಱಂ ; ಕುಂಬಾಱಂ, ಕುಂಬಱಂ.

ತ[6]ಥಾಚ ಭಾರತೇ ಹಂಪಸ್ಯ ಪ್ರಯೋಗಃ—

ಮ[7]ದಗಜಮೆರಡಱ ಬಾಲದ ।
ಮೊದಲಂ ಪಿಡಿದೆತ್ತಿಯೆತ್ತಿ ಸುರ್ಗುತ್ತಿರೆಯಾ ॥
ಸ್ವದಿಸುಗುವ ರಕ್ತಮುರಿಯೆನೆ ।
ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ ॥

ಟೀ ॥ ಅಪಭ್ರಂಶೇಽಪಿ—ಅಪಭ್ರಂಶವಿಷಯದಲ್ಲಿಯುಂ. ಕಾರಸ್ಯ—ಕಾರಶಬ್ದಕ್ಕೆ. ಏವಂ—ಗಾಱಾದೇಶಮಕ್ಕುಂ ಮತ್ತಂ ಲಕ್ಷ್ಯಾನುಸಾರಮಾಗಿ ಮಕಾರಾಗಮಮುಮಕ್ಕುಂ. ಉ ॥ (ವೃ. ನೋ.)

ಬಹುಳಶಬ್ದಸ್ವೀಕಾರದಿಂ—ಕಮ್ಮಱಂ, ಕುಂಬಱಂ.

ಕಾ[8]ವ್ಯಾವಲೋಕನದ ಸೂತ್ರಂ—

ನಿರತಂ ಗಾಱಪ್ರತ್ಯಯ ।
ಮುಱುಮುದದಿಂ ಕುಂಭಕರ್ಮಶಬ್ದಕ್ಕೆಂದುಂ ॥
ಪರಮಾಗಿರ ಗ[9]ತ್ವಕ್ಕಂ ।
ತರಲೋಪಂ ಬಹುಳವಿಧಿಯಿಂದುಂ ದೊರೆಕೊಳ್ಗುಂ ॥

ಇದರ್ಕೆ ಹಿರಿಯ ಹಂಪದೇವಂಗಳ ಪ್ರಯೋಗಂ—

ಕರಿಯುಗದ ಪುಚ್ಛಯುಗಮಂ ।
ಕರಯುಗದಿಂದೊತ್ತಿ ಪಿಡಿದು ತನ್ನ ಬಯಿಗದಿಂ ॥

---

1 ಅಪಭ್ರಂಶೇ ಕಾರಸ್ಯ. 2 ಸಂಸ್ಕೃತಾದಪಭ್ರಂಶೇ. 3 ಮಕಾರಾಗಮ. 4 ಕ್ವಚಿದಪ್ಯತಾ, ಕ್ವಚಿದಾದ್ಯಸ್ವರಸ್ಯಾಕಾರಾದಿ ಲೋಪೋ ದೃಶ್ಯತೇ. 5 ಆದಿಸ್ವರಲೋಪೋ. 6 ಈ ವಾಕ್ಯವೂ ಮುಂದಿನ ಪದ್ಯವೂ ಒಂದು ಪ್ರತಿಯಲ್ಲಿಲ್ಲ. 7 ಕ, ಖ, ಘ, ಪಂಪ 91. 8 ಈ ಸೂತ್ರವು ಕಾವ್ಯಾವಲೋಕನದಲ್ಲಿಲ್ಲ. 9 ಗಾಱಕ್ಕಂ.

ದರುಣಜಲಮುಣ್ಮಿ ತಿದಿಗಳ ।
ನಿರದೊತ್ತುವ ಕಮ್ಮಿಟಂಬೊಲಿರ್ದಂ ಭೀಮಂ॥

ಸೂ ॥ ಸ್ತ್ರಿ[1]ಯಾಮಿತಿ ಚ ॥ 188 ॥

ವೃ ॥ ಬಹುಳಗ್ರಹಣಮನುವರ್ತತೇ । ಸ್ತ್ರಿ[2]ಯಾಂ ವಿವಕ್ಷಿತಾಯಾಂ ಪೂ[3]ರ್ವೋಕ್ತಪ್ರತ್ಯಯಾತ್ ಇತಿ ಚ ಭವತಿ ॥

ಉ ॥ ಬಾಣಸಿಗಿತಿ, ಮಡಿವಳಿತಿ, ಘಟ್ಟಿವಳಿತಿ.[4]

ಟೀ ॥ ಸ್ತ್ರಿಯಾಂ=ಸ್ತ್ರೀಲಿಂಗವಿಷಯದರ್ಥಮಂ ನುಡಿಯಲ್ವೇಡಿದೊಡೆ. ಮೊದಲೊಳಿರ್ದಪದದ ಕಡೆಯಲ್ಲಿ, ಇತಿ ಚ=ಇತಿ ಪ್ರತ್ಯಯಮುಮಕ್ಕುಂ.

ಉ ॥ (ವೃ. ನೋ.)

ಸೂ ॥ ಇ[5]ಲೋಪಃ ಪರಿಣಾಮಿನಃ ॥ 189 ॥

ವೃ ॥ ಆದೇಶಿನಃ ಶಬ್ದಾದುತ್ತರಸ್ಯ ಇತಿಪ್ರತ್ಯಯಸ್ಯ ಇಕಾರಲೋಪೋ ಭವತಿ ॥

ಉ ॥ ಮಾಲೆಗಾರ್ತಿ, ಬಳೆಗಾರ್ತಿ, ಗೆಲ್ಲಗಾರ್ತಿ, ಆಟಗಾರ್ತಿ.

ಟೀ ॥ ಪರಿಣಾಮಿನಃ=ಆದೇಶಮಂ ಪಡೆವ ಶಬ್ದದತ್ತಣಿಂ. ಪರಮಾದ ಇತಿಪ್ರತ್ಯಯದ, ಇ ಲೋಪಃ=ಇಕಾರಕ್ಕೆ ಲೋಪಮಕ್ಕುಂ. ಉ ॥ (ವೃ. ನೋ.)

ಸೂ ॥ ಅಳೇ ಚ ಗುಣವಚನೇಭ್ಯಃ ॥ 190 ॥

ವೃ ॥ ಗುಣವಚನೇಭ್ಯಃ ಶಬ್ದೇಭ್ಯಃ ಸ್ತ್ರೀವಿವಕ್ಷಾಯಾಂ ಅಳ್, ಏ, ಚ ಪ್ರತ್ಯಯೌ ಭವತಃ ॥

ಉ ॥ ಬಳ್ಳಿದಳ್, ನಲ್ಲಳ್, ಪೊಲ್ಲಳ್, ಇನಿಯಳ್ ; ಚದುರೆ, ಪೆಣ್ಣೆ, ಸಿತಗೆ, ಜಾಣೆ.

ಟೀ ॥ ಗುಣವಚನೇಭ್ಯಃ=ಗುಣವಚನಮಪ್ಪ ಶಬ್ದಂಗಳತ್ತಣಿಂ ಪರಮಾಗಿ. ಸ್ತ್ರೀಲಿಂಗವಿಷಯದೊಳ್, ಅಳೇ ಚ=ಅಳ್, ಏ, ಎಂಬ ಪ್ರತ್ಯಯಂಗಳುಮಕ್ಕುಂ.

ಉ ॥ (ವೃ. ನೋ.)

ಸೂ ॥ ಇ[7]ದುದಂತಂ ಪುಂಸಿ ವಾ ॥ 191 ॥

ವೃ ॥ ಇಕಾರಾಂತಮುಕಾರಾಂತಂ ಯಚ್ಛಬ್ದರೂಪಂ ತತ್ ಪುಲ್ಲಿಂಗೇನ ಸಮಾನಂ ವಾ ಭವತಿ ॥

ಉ ॥ ನಾಣಿಲಿ, ಮಾತಾಳಿ, ಸೊಂದಿ ; ಗಾಳು, ಪಾಜು.[9]

---

1 ಸ್ತ್ರಿಯಾಮಿತಿ. 2 ಸ್ತ್ರೀವಿವಕ್ಷಾಯಾಂ. 3 ತದಂತಾಗಿತಿ ಭವತಿ, ಇತಿರ್ಭವತಿ. 4 ಇದಾದಮೇಲೆ, ಬಾ. ಇ. —ಬಾಣಸಿಗಿತ್ತಿ, ಇತ್ಯಾದಿ, ಎಂದು ಒಂದು ಪ್ರತಿಯಲ್ಲಿ ಪಾಠ ಇದೆ. 5 ಈ ಸೂತ್ರವು ಒಂದು ಪ್ರತಿಯಲ್ಲಿಲ್ಲ. 6 ಪೂರ್ವೋಕ್ತಾನಾಂ ಶಬ್ದಾನಾಂ ಇತಿಪ್ರತ್ಯಯಸ್ಯ ಇಕಾರಲೋಪೋ ಭವತಿ. 7 ಇದುದಂತಂ ಪುಂಸಿ ಚ, ಇದುತಃ ಪುಂವತ್, ಇದುದಂತಃ ಪುಂಸಿ ವಾ. 8 ಪುಲ್ಲಿಂಗವದ್ಭವತಿ. 9 ಇದಾದಮೇಲೆ, ಕ್ವಚಿದಿಕಾರಾಂತಃ—ಕುರುಡಿ, ಕಿವುಡಿ, ಗುಜ್ಜೆ, ಕೆಂಚೆ—ಎಂದು ಒಂದು ಪ್ರತಿಯಲ್ಲಿದೆ.

